# ಚೈತ್ಯಾಲಯ

( ಕವನ–ಸಂಕಲನ )



ಅಂಬಿಕಾತನಯದತ್ತ



ಸಮಾಜ ಪುಸ್ತಕಾಲಯ, ಧಾರವಾಡ

ಮುದ್ರಕರು :

ಭಾಲಚಂದ್ರ ಘಾಣೇಕರ
**ಪ್ರತಿಭಾ ಮುದ್ರಣ, ಧಾರವಾಡ**

ಪ್ರಥಮ ಮುದ್ರಣ, ಜೂನ್ ೧೯೫೭
(ಎಲ್ಲ ಹಕ್ಕುಗಳು ಗ್ರಂಥಕರ್ತರಿಗೆ ಸೇರಿವೆ)

**ಬೆಲೆ : ರೂ. ೧·೨೫**

ಪ್ರಕಾಶಕರು :

ಭಾಲಚಂದ್ರ ಘಾಣೇಕ
**ಸಮಾಜ ಪುಸ್ತಕಾಲಯ, ಧ**

# ಚೈತ್ಯಾಲಯಕ್ಕೆ ಒಂದು ಮುನ್ನುಡಿ



ಈ ಸಂಗ್ರಹದೊಳಗಿನ ಕವನಗಳು ಹೆಚ್ಚಾಗಿ ಭಾವಾನುವಾ
ಅಂಥ ಭಾಷಾಂತರಗಳಲ್ಲ. ಈ ಅನುವಾದ ಎಷ್ಟೋ ಸಲ ಭಾಷಾಂತರ
ವಷ್ಟು ನಿಕಟವಾಗಿದೆ. ಒಮ್ಮೊಮ್ಮೆ ಸ್ವತಂತ್ರ ಎನ್ನುವಂತೆ ಸ್ವಚ್ಛ
ವರ್ತಿಯಾಗಿದೆ. ಆದರೆ ಮೂಲದ ಪ್ರೇರಣೆಗೆ, ಸ್ವರೂಪಕ್ಕೆ ಚ್ಯುತಿ ಬ
ಇಲ್ಲಿಯ ಸಾಹಿತ್ಯ ರೂಪುಗೊಂಡಿದೆ ಎಂದು ನಾನು ಭಾವಿಸಿದ್ದೇನೆ. ಈ
ಗಳೊಳಗಿರುವುದು ಸ್ವಾನುಭೂತಿಯಲ್ಲ. ಸಾತ್ವಿಕದ ಉದ್ದೀಪನದಿಂದ
ಸಹಾನುಭೂತಿಯಿಂದ ಕಲ್ಪನಾಘಟಿತ ಕೃತಿ. ಈ ಕೃತಿಗಳನ್ನು ಸಹೃ
ರಾದ ವಾಚಕರು ಅನೇಕ ಸಲ ಓದಿ ಕಲ್ಪನಾರಮ್ಯವಾಗಿ ಮಾಡಿಕೊಳ್ಳ
ಎಂದು ನಾನು ತಿಳಿಯುತ್ತೇನೆ. ಆ ಬಗೆಯ ಸ್ವಪ್ರಯತ್ನ ಮಾಡದಿ
ಯು ಕೆಲ ಮಾತುಗಳು ಅತಿಶಯೋಕ್ತಿಗಳಾಗಿಯೋ ಕೇವಲ ಕಲ್ಪನಾರ
ಚವಾಗಿಯೋ ಕಾಣಬಹುದು. ಆದರೆ ಇಲ್ಲಿಯ ಕವ
ೀ ಅರವಿಂದರು ಶ್ರೀ ಮಾತೆಯವರು 'ಋಷೀಣ
ಚಮರ್ಥೋಽನುಧಾವತಿ' ಎಂಬ ಪಂಕ್ತಿ
ವರು. ಅದರ ಹದ ಕನ್ನಡದಲ್ಲಿ ಇಳಿಯು

ರೆ ಭಾಷಾಂತರಕ್ಕಿಂತ ಭಾವಾನುವಾ
ಪ್ರಾತಿಭ ನಿರ್ಮಿತಿಯೋ ಲೇಸು
ಹಾಗೆ ಸ್ವತಃ ಕೃತಿರಚನೆ
ನಾನು ಅಲ್ಲಲ್ಲಿ ಸ್ವಾಭಾವಿ
ಗಳಲ್ಲಿ ಶ್ರೀ ಮಾತೆಯವರ
ವೆಲ್ಲ ಶ್ರೀ ಅರವಿಂದರ
ಾಗ ನಾನನುಭವಿಸಿದ

ಅವರ ಸಾವಿತ್ರಿಯ ಭಾಗಗಳನ್ನು ಮಾಡುವಾಗ ಅನುಭವಿಸುವದು ಕಷ್ಟ ರಿತು. ವಿಫಲತೆಯ ಅನುಭವವೂ ಬಂದಿತು. ಆ ವಿಫಲತೆಯೂ ಕೃತಿ ರ್ಾಣ ಸಮರ್ಥವಿದ್ದಿತು. ಆಗ ಬಂದ ಕೆಲ ಕೃತಿಗಳನ್ನು ನನ್ನ 'ಹೃದಯ ದ್ರ' ಸಂಗ್ರಹದಲ್ಲಿ ಸೇರಿಸಿದ್ದೇನೆ. ವಚನಗಳು ಎಂಬ ವಿಭಾಗದಲ್ಲಿ ಶ್ರೀ ಂದರ ಮತ್ತು ಮಾತೆಯವರ ಉಕ್ತಿಗಳನ್ನು ಸುಭಾಷಿತಗಳನ್ನಾಗಿ ಶ್ಲೋಕ ಗಿ ವಿರಚಿಸಿದ್ದೇನೆ. ಅವುಗಳಿಂದ ಬುದ್ಧಿಗೂ ಭಾವಕ್ಕೂ ಒಂದು ಎಂದೀತೆಂದು ನಾನು ಎಣಿಸುತ್ತೇನೆ.

ಪೂರ್ವಾನುಭವವನ್ನೆ ಸ್ಮರಣೆಯಿಂದ ಪುನರಾನುಭೂತಿಗೆ ತಂದುಕೊಂಡು ಸಾಸ್ವಾದನ ಮಾಡುವ ಕಾವ್ಯಕೃತಿ ಒಂದು ಬಗೆಯದು. ಅನನುಭೂತ ಭಾವಗಳನ್ನು ಅನುಭವಕ್ಕೆ ಎಟಕುವಂತೆ ಶಬ್ದಶಕ್ತಿ ಸಾಮರ್ಥ್ಯದಿಂದ ಬೇರೆ ಭೂಮಿಕೆಗೆ ಎತ್ತುವದು ಇನ್ನೊಂದು ಬಗೆಯ ಕಾವ್ಯಕೃತಿ. ಅರವಿಂದರ ಕಾವ್ಯ ಆ ಜಾತಿಯದು. ಅನುಭವ ಎಷ್ಟೇ ವಿಶಿಷ್ಟ ಸ್ವರೂಪ ರೂ ಅದರ ಸಾಹಿತ್ಯೀಕರಣವಾದೊಡನೆ ಅದರ ಸಾಮಾನ್ಯೀಕರಣವೂ ದೆ—ಅಂದರೆ— ಅಸಾಮಾನ್ಯವನ್ನು ಸಾಮಾನ್ಯಕ್ಕೆ ತಂದು ಮುಟ್ಟಿ ಕಾರ್ಯವೂ ಸಾಮಾನ್ಯವನ್ನು ಅಸಾಮಾನ್ಯತೆಗೆ ಎತ್ತುವ ಕಾರ್ಯವೂ ಮುಖೇನ ಯಾವಾಗಲೂ ನಡೆದಿರುತ್ತದೆ. ಹೀಗಾಗಿಯೇ ವೇದದ ಅನು ವೇದಕ್ಕೂ ನಿಲುಕದ ಎಂದೆನಿಸಿಕೊಳ್ಳುವ ಅನುಭವವು ದಾಸರ ಶರಣರ ಪ್ರಪಂಚದಲ್ಲಿ ಬಂದು ಜನರ ನಾಣ್ನುಡಿಯಲ್ಲಿ ನೆಲೆಗೊಳ್ಳುತ್ತದೆ. ಈ ಸತ್ಕರ್ಮ ಕನ್ನಡವು ಸಾವಿರ ವರುಷಗಳಿಂದ ಕೃತಾರ್ಥತೆಯನ್ನು ಪಡೆಯುತ್ತಲೆ ಇರು ಂದ ಶ್ರೀ ಅರವಿಂದರ ಅನುಭವೋಕ್ತಿಯನ್ನು ಕನ್ನಡಕ್ಕೆ ಸೇರಿಸಿಕೊಳ್ಳು ಅಷ್ಟು ಕಷ್ಟ ಎಂದು ತೋರಲಿಲ್ಲ. ಹೀಗೆ ಮಾಡುವಾಗ ಕನ್ನಡ ಸಾಹಿ ಅನುಭಾವ ಸಂಪತ್ತಿಯಿಂದ ಬಂದ ಶಬ್ದವೈಭವವನ್ನೆಲ್ಲ ಇಲ್ಲಿ ಬಳಸಿ ಲಾಗಿದೆ. ಅದೇ ಬಗೆಯ ಶಬ್ದಸಂತತಿಯ ಧಾರೆಯನ್ನು ಕಂಡು ವಾಚ ಬೆರಗಾಗಲಿಕ್ಕಿಲ್ಲ ಎಂದು ನನ್ನ ಭಾವನೆ. ಸಾಹಿತ್ಯ ಒಂದು ಸೋಪಾನ.

ಇಲ್ಲಿಯ ಕೆಲ ಕವನಗಳಿಗಾಗಿ ಬಳಸಿದ ಛಂದಸ್ಸಿನಲ್ಲಿ ಒಂದು ಬಗೆಯ ತು ಇದೆ. ಸಾಮಗಾನದಲ್ಲಿ ಸ್ವರವಿಸ್ತಾರ ಮಾಡಿಕೊಳ್ಳುವಂತೆ ಇಲ್ಲಿಯ ಳನ್ನು ಉಚ್ಚರಿಸುವಾಗ ಮಾಡಿಕೊಂಡರೆ ಓದು ಸುಲಭವಾಗುವದು.

ಇದೇ ಬಗೆಯನ್ನು ನನ್ನ ಬೇರೆ ಕವನಗಳಲ್ಲಿಯೂ ಬಳಸಿದ್ದೇನೆ. ನನ್ನ ಸೋ
ಪಾನದೊಳಗಿನ ' ಸಪ್ತಕಲಾ ' ಎಂಬ ಕವನ ಆ ಜಾತಿಯದು.

ಈ ಕೃತಿಗಳನ್ನೆಲ್ಲ ಕನ್ನಡಕ್ಕೆ ತರಲು, ಹಾಗೆ ಮುದ್ರಿಸಲು ಸಮ್ಮತಿ ಕೆ
ಶ್ರೀ ಮಾತೆಯವರಿಗೂ ಅದನ್ನು ಪಡೆದುಕೊಡಲು ನೆರವಾದ ಸನ್ಮಿತ್ರರು
ಮಾಧವರಾವ್ ಪಂಡಿತ ಅವರಿಗೂ ನಾನು ಋಣಿಯಾಗಿರುವೆನಲ್ಲದೆ
ಕೃತಜ್ಞತೆಯ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ಈ ಅನುವಾದಗಳ
ವನ್ನು ಹುಬ್ಬಳ್ಳಿಯ ಶ್ರೀ ಅರವಿಂದ ಮಂಡಲದ ಗುರುಬಂಧುಗಳು
ಮಾಡಿದ್ದಾರೆ. ಈ ಸಂಗ್ರಹದಲ್ಲಿ ಅವುಗಳನ್ನು ಸೇರಿಸಲು ಅನುಮತಿ
ಕ್ಕಾಗಿ ಅವರಿಗೂ ನಾನು ಋಣಿ.

' ಚೈತ್ಯಾಲಯ 'ವು ವಾಚಕರಲ್ಲಿ ಹೊಸ ಚೈತನ್ಯವನ್ನು ಉ
ಅದನ್ನು ಸ್ಥಾಯಿಗೆ ತರಲು ನೆರವಾಗುವದು ಎಂಬ ನಂಬಿಕೆಯಿಂದ ಈ
ಸಂಗ್ರಹವನ್ನು ಕನ್ನಡ ಸಹೃದಯರಲ್ಲಿ ಒಪ್ಪಿಸುತ್ತಿದ್ದೇನೆ.

ಸಾಧನಕೇರಿ
೧೧-೫-೫೭

—**ದ. ರಾ. ಬೇ**

# ಪರಿವಿಡಿ

# ಪೂರ್ಣ ಮಾಡು

ಅಂದೆ ನೆಲವು ಪಡೆದೀತು ಅಮರ ಜೀವಂತ ಶಾಂತಿಯನ್ನು
ಎಂದು ನಾಡ–ನಡೆವಳಿಕೆಯಲ್ಲಿ ನೆಲೆಗೊಂಬುದೊಂದೆ ನಿಜವು.
ಆ ಪೂರ್ಣ ನಿಜದ ನೆಲೆ ಮೊಲೆಯ ಬಯಸಿ ಭಕ್ತಿಯಲಪೇಕ್ಷಿಸುವೆವು.
ನೀ ಪೂರ್ಣ ಮಾಡು ಹೇ ದೊರೆಯೆ ! ಎಲ್ಲಿಯೂ ಬಯ್ತ ಬಯಕೆಯನ್ನು.

# ನಾಳಿನ ಮಗು

ಫಲದ ನಿರ್ಣಯವು ಏನು ಆದರೂ ಕ್ಷುಬ್ಧನಾಗನವನು
ನೇರಾದ ರೀತಿ ರುಜು ಅವನ ನೀತಿ, ಸಿದ್ಧಿಸದೆ ಇದ್ದರೂನು
ತನ್ನ ಯೋಗ್ಯತೆಗೆ ತಕ್ಕ ರೀತಿಯಲಿ ಕರ್ಮಕುಶಲನಾಗಿ
ಸತ್ಯವನ್ನೆ ಸಾರುವನು ಜಗಕೆ ನಿರ್ಭೀತ ಧೀರನಾಗಿ.

ಫಲವೆಂದೆ ಬರಲಿ ಯುಗಯುಗವು ತಾಳಿ ಎದೆಗೆಡದೆ ಇರುವನಾತ
ಗೊಣಗುಡದೆ ಅವನು ಅವಘಡವ ಸಹಿಸಿ ಎದುರಿಸುವ ವೀರಜಾತ
ಸಡಲಿಸನು ಅವನು ಹವಣಿಕೆಯ ಹಿಡಿತ ಶತಕಾನುಶತಕವಾಗಿ
ಸಿದ್ಧಿಸಲಿ ಬಿಡಲಿ ಸಮತೆಯನು ಕಳೆದುಕೊಳನಾತ ಸಾಮ್ಯಯೋಗಿ.

ಅಪಜಯವು ಬರಲಿ ಕೊನೆ ವಿಜಯವಿಹುದು ಎನುತೆನುತ ಯುದ್ಧವೆಸಗಿ
ಮೊಗದಲ್ಲಿ ನಗೆಯು, ಎದೆ ಸೊಗದ ಬಗೆಯು, ಸ್ಥಿತಿ ಬರಲಿ ಎಂತೊ ಮಸಗಿ
ಪರಗುಣದ ರಸಿಕ ಸಹಕಾರಿಯವನು ಸತ್ಕೃತ್ಯವೆಲ್ಲಕೂನು
ಸಂಯಮದಿ ಬದ್ಧ ಪ್ರಾಮಾಣ್ಯಸಿದ್ಧ ಓೀಗಿರಲು ಬೇಕು ಮಗುವು.
ಅವನಲ್ಲಿ ದಿವ್ಯಜ್ಯೋತಿಗಳ ಉದಯ ತೋರುವದು ಬರುವ ಯುಗವು.

ಚೈತ್ಯಾಲಯ

# ವಿದ್ಯುತ್‌ಪುತ್ರನ ಅವತಾರ

ಸುಸಮರ್ಥನಾದ ವಿದ್ಯುತ್‌ಪುತ್ರನೊಬ್ಬ ತಾನೀ ಭೂಮಿಗಿಳಿದು ಬಂದ
ಅಪ್ರತಿಮ ತ್ವರಿತಗತಿ ಅಗ್ನಿ–ಪಾದಗಳಿಂದ.
ಮಾನವನ ವೈಕಟ್ಟು ಘನಗರ್ಜನೆಯ ತೊಟ್ಟು,
ನರಗರ್ಭದಲ್ಲಿ ಹುಟ್ಟಿತ್ತು ಬೆಳಕು.

ಸ್ವರ್ಗದತಿ ಶಾಂತಗತಿ, ಮಹಿಮೆಯಾ ಮಾಧುರ್ಯ, ಪರಿಶುದ್ಧರಾಗ
ಗರಿಗೊಂಡ ಬಲ ಇಳಿದು ಬಂದವಾಗ.
ಎಲ್ಲ ದೇವತೆಗಳೂ ಒಂದೆ ಮರ್ತ್ಯ ಶರೀರದಲ್ಲಿ ಬಾಳಿದವು
ಒಂದೇ ಹೆಸರ ತಾಳಿದವು.

ಅಗಲಗಲ ಗತಿಯ ಅಲೆ ಮಸಕು ಭೂಮಂಡಲದಿ ಬಂತು ಬಳಲಿ
ಉತ್ಫುಲ್ಲಸ್ವಪ್ನೋತ್ಥಗುಂಫಗಳಲಿ.
ಭವ್ಯತೆಯ ಕರುವಿಟ್ಟ ಹಾಗೆ ಬಾಳಾಗಿತ್ತು
ಕಡಲಗಲ ಕೈ ಕಾಲ-ಚಕ್ರ ಅಮುಕಿತ್ತು.

ಮಾನವನ ಆತ್ಮ ಮತ್ತೊಮ್ಮೆ ಪಡೆದಿತು ಬಾಳ ಸಾರಥ್ಯ
ಧೀರ ಉದ್ಧತ ದೇವದೇವತೆಗಳಾತಿಥ್ಯ.
ಪ್ರಭಂಜನ ಪಕ್ಷ ಉತ್‌ಕ್ಷಿಪ್ತ ವಾಯುಪಥದಲ್ಲಿ ಹಾರಿತ್ತು
ಭವ್ಯ ಆದರ್ಶಕ್ಕೆ ಗುರಿಯಿಟ್ಟು ಎಸೆದ ಈಟಿಯ ಹಾಗೆ ಏರಿತ್ತು.

ಡೆಂಡಣಿಸಿ ಕಳಚಿ ಬಿದ್ದವು ಪುರಾತನಾಯಸ ಕವಚ
ಗೋಡೆ ಸಿಡಿದೊಡೆದು ಬಿದ್ದಿತು ಪುರಾಣ ಪ್ರಕೃತಿ
ತರುಣತರ ಸೌಂದರ್ಯ, ಸುವಿಚಾರ, ಸುಪ್ರಭೆಯು ಜಗದಿ
ಹೊಕ್ಕ ದೇವನು ಮತ್ತೆ ತನ್ನ ಹೊಸತನದಿ.

ಮೂಡಿತ್ತು ದೇವವಾಣಿಯು ಸೊಲ್ಲು ಮಾನವರ ತುಟಿಯಲ್ಲು
ಹೃದಯ ಎಚ್ಚತ್ತಿತ್ತು ಮಿಂಚು ಬೆಡಗಿನ ಬಿಳಿಯ ನಸುಕುಗಳಲು
ಗಾಳಿ ಬೆಳಕಿನ ಬಟ್ಟೆ, ಉಸಿರು ಹರ್ಷದ ಕುಸರು
ದೇವಲೀಲೆಯು ಆಟದಂತೆ ಬಾಳು.

# ಅಗ್ನಿರಾಜ

**ಅಗ್ನಿರಾಜ :**

ಬೆಂಕಿ ನಿಲುವಂಗಿ ತೊಟ್ಟುಕೊಂಡು ಬುವಿಯಿಂದ ಬಂದ ಜೀವ
ಸಪ್ತಸ್ವರ್ಗಗಳ ಸುಪ್ತ ಮೌನವನು ದಾಟಿಕೊಂಡು ಯಾವ ?
ನೀನು ಏನು ಅಧ್ಯಾತ್ಮದೌರಸನೊ ? ಅಭವ ಸ್ವಯಂಭವನು.
ಪರಂಧಾಮದಾ ಅತಿಥಿಯೇನು ? ಪೌರಾಣ ಕಾಲದವನು.

**ಮನುಕುಲ ದೂತ :**

ಮಾನವ್ಯಕುಲದ ಹರಿಕಾರ ನಾನು, ಅಂತರ್ಯದಾತ್ಮನಾನು ;
ಇರುಳನ್ನು ಕೊಡಹಿ ಸಾವನ್ನೆ ತಡೆದ ಪುಸ್ಪ್ರಥನು ಪ್ರಮುಖ ನಾನು :
ಅಮೃತಬಿಂಬ ಪ್ರತಿಬಿಂಬಿಸಿರುವ ಸೌಂದರ್ಯಲಕ್ಷ್ಮಿಸೂನು.
ಅಮರ ಜ್ಯೋತಿ ಮೃಗವೇಧಕಾಗಿ ಬಂದಂಥ ವ್ಯಾಧಶಿವನು.

**ಅಗ್ನಿರಾಜ :**

ತನ್ನ ಶಕ್ತಿಯಲಿ ನಿನ್ನ ಸುತ್ತಿರುವುದಾವ ಬೆಂಕಿ ಉರಿಯು ?
ಪಾಲಿಸುತ್ತಿರೆಯು ಬರ್ಚಿ ನಾಲಗೆಯ ಚಾಚಿ ಕಾಯುತಿರೆಯು
ಸನಾತನದ ಸತ್ಕಾಲದಲ್ಲಿ ಸಂಚರಿಸುತಿಲ್ಲಿ ಬಂದೆ
ಕಲ್ಪನಾತೀತವಾದ ನವಕಿರಣದೊಂದು ಅಂಶವೆಂದೆ ?

**ಮನುಕುಲ ದೂತ :**

ನವೋನವದ ಜಾಗೃತಿಯಲೆದ್ದ ಜೀವಾಗ್ನಿ ತೋಚುತಿಹುದು ;
ಮರಣ ಸೀಳಿ ಉದ್ಭವಿಸಿ ಮೇಲೆ ಶಾಶ್ವತಕೆ ಚಾಚುತಿಹುದು ;
ಯಜ್ಞಪಕ್ಷಿ ಗುರಿಯತ್ತ ಹಾರಿ ಶಿಖೆ ಏರಿ ಹರಿಯುತಿಹುದು ;
ಮಾನವ್ಯದಲ್ಲಿ ಮಲಗಿದ್ದು ಎದ್ದ ದೇವತ್ವ ಉರಿಯುತಿಹುದು.

**ಅಗ್ನಿರಾಜ :**

ಭಂಗುರದ ಹಂಗು ಹರಕೊಂಡು ಬಂದೆ, ಓ ಮಗುವೆ ಏನೊ ಬೇಕೊ ?
ಮುಕ್ತನಾಗಿ ಸಾವಿರದ ಸಯ್ತಿನಲಿ ಗುಮ್ಮನಿಹುದೆ ? ಸಾಕೋ.
ಏನು ಬ್ರಹ್ಮಸಂಮುಖಕೆ ಸಾಕ್ಷಿಯಾಗಿರುವೆ ಎನುವೆ ನೀನು
ಅಸ್ಪರ್ಶ ಯೋಗ ನಿರ್ವಾಣದಲ್ಲಿ ಲಯವಾಗಬೇಕು ಏನು ?

**ಮನುಕುಲ ದೂತ :**

ಪಾತಾಳಖಾತದಜ್ಞಾನದಲ್ಲು ಹೊತ್ತಿರಲಿ ದಿವ್ಯದೀಪ್ತಿ.
ನರಕಯಾತನೆಯ ಜೀವದಲ್ಲಿ ತಾನಿರಲಿ ದೇವಶಕ್ತಿ.
ಮೂರುಕಾಲಕೂ ಮೀರಿ ದುಃಖಿಸದ ಸುಖವು ಭೂಮಿಗೆಂದೆ
ಅಕ್ಷುಬ್ಧವಾದ ಹದಗೆಡದ ಶಾಂತಿ ಮಾನವಗೆ ಬೇಡಬಂದೆ.

## " ಅಂತರ್ಯಾಮಿ ವೈಶ್ವಾನರ "

ನನ್ನ ಜೀವಾಲಿಂಗನಾಂಗದಲ್ಲಿ ಪೂರ್ಣ ಪ್ರಪಂಚ
ಕೃತ್ತಿಕೆಯ ಕಿಚ್ಚ್ಚಗಸ್ತ್ಯನ ತಪಃಸುಖವು.
ಜೀವಜೀವದ ರೂಪರೂಪದಲಿ ನಾ ಕಾಂಬೆ
ನನ್ನದೇ ವ್ಯೆಯ ಮತ್ತೊಂದು ಮುಖವು.

ನನ್ನ ನೋಡುವ ನೋಟ ನನ್ನದೇ ಕಣ್ಣಾಟ
ಎಲ್ಲಿದೆಯ ಮಿಡಿತ ನನ್ನೆದೆಯ ಠಾವು.
ನನ್ನ ನರವಲಿ ಹರಿಯುತಿದೆ ಜಗವ ಮಧುರ ಸೊಗ
ಆದರ ದುಃಖವ ಕೋಟಿ ನನ್ನ ನೋವು.

ಅವರೇನಾ ಕರ್ಮಸಂತತಿಯ ತೆರೆಗಳೊಲು
ನನ್ನ ಮೇಲ್ಮೈ ಮಾತ್ರ ನನ್ನ ತಿರುಳು.
ಮೊಳಕೆ ಮೂಡದ ಬೀಜ, ಕಾಲ ಮೀರಿದ ತೇಜ
ನಾನು ಕನ್ನಡಿ ಉಳಿದುದೆಲ್ಲ ನೆರಳು.

ನನ್ನ ಬ್ರಹ್ಮಾಂಡದಲಿ ಸಂಸಾರ ಸುಳಿ ಇತ್ತು
ಅಲ್ಲಿ ನಾ ಹುದುಗಿದ್ದೆ : ಮುನ್ನೀರ–ಎದೆ-ಮುತ್ತು !

# ಬಂಧವಿಮೋಚನೆ

ಮನದ ರಿಂಗಣದ ರಂಗಭೂಮಿಯನು ಅಗೆದು ಬಗೆದು ನಾನು
ಆತ್ಮಮೌನಿ ಮುನಿಯಾದೆ ಬಾನಿನಲಿ ನಿಂತ ಹಾಗೆ ಭಾನು.
ಪ್ರಾಣ ಅಲ್ಲ; ಹೊತ್ತರಿಯೆ ನಾನು; ಕ್ಷಯರಹಿತ ಚಂದ್ರನಾಗಿ
ಸನಾತನದ ಆ ಬ್ರಹ್ಮಗೋಲದಲಿ ನಾನೆ ಕೇಂದ್ರವಾಗಿ.

ಮುಕ್ತನಾದೆ ನಾ, ತೀರಿಹೋಯ್ತು, ಆ ಅಲ್ಪ ಆತ್ಮರಚನ.
ಅಮೃತ ನಾನು, ಕೇವಲನು ನಾನು, ಮೀರಿದೆನು ವರ್ಣವಚನ.
ನಾನೆ ಕಲ್ಪಿಸಿದ ವಿಶ್ವದಿಂದ ಹೊರಬಿದ್ದೆ ಎದ್ದೆ ಮೇಲೆ.
ನಾಮಕ್ಕತೀತ ನಾನಾದೆನಿಂದು ನನಗಿಲ್ಲ ಮೇರೆ ಬೇರೆ.

ನನ್ನ ಮನವು ಗಂಭೀರ ಗುಂಭ ತುಂಬಿಲ್ಲ ಹಿಗ್ಗು ಬೆಳಕು.
ನನ್ನ ಹೃದಯವಾನಂದತುಂದಿಲವು ಪ್ರೇಮದೊಳಗು ಥಳಕು.
ಮುಟ್ಟುತಟ್ಟು ಕಿವಿ ಕಣ್ಣು-ಕಟ್ಟು ಕರಣಕ್ಕೆ ಇಲ್ಲ ಕುಂದು
ಆ ಅಚ್ಛ ಸ್ವಚ್ಛ ಅನಂತ್ಯದಲ್ಲಿ ಈ ದೇಹ ಏಕಬಿಂದು.

ಸತ್‌ಪುರುಷ ಹರುಷ ಆನಂದ ಸಿಂಧು ಲೋಕೈಕವಾದ ಸರ್ವ
ಯಾರೊಬ್ಬನಲ್ಲ, ಆ ಎಲ್ಲರಲ್ಲಿ ಇರುವೊರ್ವ ನಾನೆ ಸರ್ವ.

# ಸುವರ್ಣದೀಪ

ನನ್ನ ಮಿದುಳು ದಳವೇರಿ ದಕ್ಕಿಸಿತು ಸ್ವರ್ಣದೀಪ್ತಿ ಇಳಿಯೆ.
ಮನದ ಕರಿನೆರಿಯ ಹುಳುಗಳೆಲ್ಲ ಹೊತ್ತೇರಿ ನಿದ್ದೆ ತಿಳಿಯೆ.
ಜ್ಞಾನಸಮಯದ ಉದ್ದೀಪನಕ್ಕೆ ಪ್ರಜ್ವಲಿತವಾದ ಮೇಲೆ.
ಶಾಂತ ಕಾರ್ತಿಕವ ನಟ್ಟನಡುವೆ ಉರಿವಂತೆ ಪ್ರೇಮಜ್ವಾಲೆ.

ಕೊರಗೀದು ಬಂದಿರಲು ಆಹ! ಆ ನಿನ್ನ ಸರ್ಣದೀಪ
ವಾಣಿ ಇನಿದಾಗಿ ಮಾಗಿ ನುಡಿಯುತಿದೆ ಏಕರಾಗ ಭೂಪ.
ಶ್ರುತಿಯ ಮೀಟಿದರೆ, ಸ್ತೋತ್ರಜಲಧಿ ನಿನ್ನಡಿಗೆ ನುಗ್ಗಲುಂಟು
ಅಮೃತ ಕುಡಿದ ಗಂಧರ್ವಮತ್ತ ಗೀರ್ವಾಣ ಹಿಗ್ಗಲುಂಟು.

ನಿನ್ನ ಸ್ವರ್ಣದೀಪ್ತಿಯಲಿ ಜೀಗಿತಿಗೊ ನನ್ನ ಹೃದಯ ಭಾಗ
ನಿನ್ನ ಶಾಶ್ವತದ ಉಸಿರು ಆಡುತಿದೆ ಪ್ರಾಣದಿಟುಕು ಜಾಗ.
ನಿನ್ನ ಸುತ್ತು ಕಟ್ಟಿತ್ತು ಈಗ ದೇಗುಲವೆ ರೂಪಗೊಂಡು
ಹೃದಯರಾಗಗಳು ಶಿಖರಗಟ್ಟುತಿದೆ ಧೂಪ ಎಂದುಕೊಂಡು.

ಪಾದಗಳಲಿ ಇಳಿದಿರಲು ನಿನ್ನದಾದಾ ಸುವರ್ಣದೀಪ
ನನ್ನ ಇಳೆಯು ಲೀಲಾಭೂಮಿ ನಿನ್ನಡಿಗೆ ಬಹು ಸಮೀಪ.

# ಅನಂತ ಸಾಹಸ

ಆನಂತ್ಯದೊಂದು ನವ ಜಲಧಿಯಲ್ಲಿ ಹೊರಟಿಹುದು ನನ್ನ ನಾವೆ.
ಎಲ್ಲಿ ಹೊರಟಿತೋ ; ತನ್ನ ಮಾನವ್ಯ ಬಿಟ್ಟು ಬೇರೆ ಠಾವೆ ?
ಮುಸುಕು ಮುಸುಕು ಹಿಂದೆಲ್ಲ, ಮುಂದೆ ಪಾತಾಳಖಾತ ಸಿಂಧು
ಗೊತ್ತುಗುರಿಯಿಲ್ಲ, ದೂರ ಧ್ರುವವಾಚೆ ಬೆಳಕು ಸ್ಫಟಿಕ ಬಿಂದು !

ಕಾಣದೊಂದು ಕೈ ಹುಟ್ಟು ಹಾಕುತಿದೆ, ಕಾಂಬೆ ಕತ್ತಲೊಂವೆ
ಇರುಳು ರಾತ್ರಿ ಅಮವಾಸಿ ಗುಹೆಯು ಬಾಯ್ತೆರೆದ ಹಾಗೆ ಮುಂದೆ.
ಒಳಗೆ ಕೆಳಗೆ ಹಸಿನಾತವೆಂದು ಪಂಚಾಸ್ಯ ಗುಡುಗುತಿಹುದು.
ಸತ್ತ ಒಲವು ಬೇಸತ್ತ ಒಲವು ಘನ ನಿದ್ರೆ ತೊಡಗುತಿಹುದು.

ಅರಸಿ ಹೊರಟ ಆ ಮಹಾಶಕ್ತಿ ನನ್ನನ್ನೆ ಸುತ್ತಿ ಮುತ್ತಿ
ತೋಡಿಹುದಗಳ್ತೆ ಮುಟ್ಟಿಹುದು ಅಬ್ಬ ನಾಗೇಂದ್ರನನಂತ ನೆತ್ತಿ
ಮೇಲೆ ನೋಡಿದರೆ ಯಾವ ಜೀವವೂ ತುಳಿಯದಿದ್ದ ಶಿಖರ
ಮುಳುಗಿ ಹೋದೆ ಅದ್ವೈತ ಐಕ್ಯದಲಿ ಅದರ ಆಚೆ ಪ್ರಖರ.

ಎಂಥ ಜಾಗೃ ಉರಿದೆದ್ದ ಹಾಗೆ ಭಗವಂತ ! ಏನು ಕಿಚ್ಚು !
ಅವತರಿಸಲಿರುವ ಆ ಮೆಚ್ಚು ಮಾಟ ಆನಂದವೆಂಬ ಅಚ್ಚು.

# ವಿಶ್ವಾವತಾರ

ಒಂದು ಬಿನ್ನಾಣವಿಹುದು ಸುಸಮಾಧಿ ಸುಪ್ತ ಸೂರ್ಯನಂತೆ.
ಹೃದಯಗುಹೆಯಲ್ಲಿ ಬಿಗ್ಗಿ ಹೊತ್ತಿಹುದು ಅಗ್ನಿಸತ್ವದಂತೆ.
ಹೃದಯ ಹೃದಯ ಮಿಲಿತೈಕ್ಯದಂಥದಿದೆ ಒಂದೆ ಹೃದಯಲೋಕ.
ಸುಪ್ರಮೋದ ಪರ್ವತದ ಅಗ್ರಕಿದೆ ಭವ್ಯಮೌನ ಮೂಕ.

ಶಾಂತಿ ತೊಡೆಯ ತೊಟ್ಟಿಲದಲಾಡಿಸುವಳಲ್ಲಿ ದೈವಶಿಶುವ
ನೆಲವ ಮುಗುಡ ಮುದ್ದಿಟ್ಟು ಕಳೆಯುವಳು ಕರುಣೆ ತನ್ನ ಹ
ಬಹು ರಹಸ್ಯಗಳ ಹೊಟ್ಟೆಯಲ್ಲಿ ಮನೆ ಮಾಡಿ ಇಹುದು ಸಾಕ್ಷಿ
ದೇಹ ಧರಿಸಿ ಬಂದಿರುವ ದೇವ ಏಕಾತ್ಮ ಯಕ್ಷ ಯಕ್ಷಿ.

ತೆರೆಯ ಮೇಲೆ ಬರಿ ಶಬ್ದ ಶಿಖೆಯು ಹಿಂದಿಹುದು ಹೃದಯಧಾಮ
ಚಿತ್ರರೇಖೆಯಲಿ ಲೇಖಿಸಿಹುದು ಅದ್ಭುತ ರಹಸ್ಯನಾಮ.

# ಕಲ್ಲುಮೂರ್ತಿ

ದೇವದೇವತಾ ಪಟ್ಟಣದಲ್ಲಿ । ದೇಗುಲದೊಲು ಕಿರಿಕಟ್ಟಡದಲ್ಲಿ ॥
ಕಟ್ಟಿರಕದ ಕೈ ಕಾಲೂ ಕಣ್ಣು । ದೇವತೆ ನೋಡಿದಳೊ ನನ್ನನ್ನು ॥
ಸಜೀವ ಜಾಗೃತ ಅಮೃತವು ದಿವ್ಯ । ಏಕಮೂರ್ತಿಯೇ ಅನಂತಭವ್ಯ ॥
ಮಹಾದೇವಿ ಮಾತಾಯಿಯು ಅಂಬೆ । ಪ್ರತ್ಯಕ್ಷವು ಇಚ್ಛೆಯು ಎಂಬೆ ॥
ಪೃಥ್ವಿಯ ಗರ್ಭದ ಆಳಡಿಯಲ್ಲಿ । ನಿಸ್ಪಷ್ಟದ ನಿದ್ರೆಯ ತೊಡೆಯಲ್ಲಿ ॥
ಸರ್ವಶಕ್ತ, ದುರ್ಭೇದ್ಯವು ಮೂಕ । ಗಗನ–ಜಲಧಿ–ವನ ವ್ಯಾಪಿಸಿ ಏಕ ॥
ಮುಸುಕಿತು ಇಗೊ ಮಾನಸನಾವರಣ । ಮೌನವನೇ ಮಾಡಿದಳಾಭರಣ ॥
ಅಗಮ್ಯ ನಿಃಶಬ್ದವು ಸರ್ವಜ್ಞ । ಸುಷುಪ್ತಿಯೊಳು ಎಚ್ಚತ್ತನು ಪ್ರಾಜ್ಞ ॥
ಕಂಡಿತು ದೃಷ್ಟಿಯು ಕೇಳಿತು ಶ್ರುತಿಯು । ಏಕವ್ಯಕ್ತವು ಆಯ್ತೊ ಮೂರ್ತಿಯು ॥
ಪೂಜ್ಯವು, ಪೂಜಕ, ಪೂಜೆಯು, ಪೂವು । ರೂಪ ರೂಪಗಳು ನಾವೂ ನೀವೂ ॥
ಹೆಣ್ಣೂ ಮಣ್ಣೂ ಹೊನ್ನೂ ಒಂದು । ರಮ್ಯಗಮ್ಯ ಶ್ರೀ ರೂಪವು ಎಂದು ॥

# ಅತಿಥಿ

ಕಂಡೆ ನನ್ನ ಅಂತರ್ಯಾದಮರಪುರುಷನನು ತೆರೆಯುತಿಹನ
ಮನದ ಮುಖವಾಡ ತೊಟ್ಟುಕೊಂಡ, ಭವ್ಯಾಕಾರ, ಘನನ
ಮೃತ್ಯುಲೋಕವನು ಅಮೃತಸಂತೆ ಯಾವೊತ್ತು ಕಾಣುವವನ
ಮರ್ತ್ಯಲೀಲೆಯನು ದಿವ್ಯಪ್ರೇಕ್ಷಕನ ಹಾಗೆ ನೋಡುತಿಹನ !

ಹೃದಯಕಿರುವ ಪ್ರೇಗಿರುವ ಹರ್ಷ—ವೇದಗಳ ಸ್ಪರ್ಶಗರ್ಶ
ತಟ್ಟಲರಿಯನಾಗರ್ಭಗುಡಿಯ ನಿಃಶಬ್ದ ಬಿಜ ವಿಮರ್ಶ.
ಸಂಕಟವು ಭಯವು—ಭೂಬಿಟ್ಟ ವಿಧಿಯ ಕ್ರೂರಾತ್ಮ ಕರ್ಮಶುನಕ
ಹರಕೊಳ್ಳಬಹುದು ಪ್ರೈಮನವ, ಬರವು—ಮುಕ್ತಾತ್ಮನಲ್ಲಿ ತನಕ

ನಿರ್ಲಿಪ್ತವಾದ ಆ ದೇವಕಿರಣ ಹೃದಯದಲಿ ಸಾಕ್ಷಿಯಾಗಿ
ನಿಷ್ಕಾರಣವಾದ ನಾಸ್ತಿಕವ ಅಚ್ಚ ಜೀವಾತ್ಮದಕ್ಷಿಯಾಗಿ
ಸರ್ವಶಕ್ತ, ದುರ್ಗಮ್ಯ, ಅತಿಥಿ ಊರ್ಧ್ವೋರ್ಧ್ವ ಅಗ್ನಿ ಸಿಧಿಯು
ಮರಣ ಬರಲು, ಬಲಿಯೆಂದು ಅವನೆ ಎತ್ತಿತ್ತು ದಿವ್ಯವಿಧಿಯು

ಪೂರ್ವಪ್ರಕೃತಿಯಾ ಮನೆಯು ಬೀಳುತಿದೆ, ಕೊಚ್ಚಿ ಕೆಳಗೆ ಕುಸಿದು
ದುರ್ದಮ್ಯನಂತೆ ಅಕ್ಷುಬ್ಧ ಶಾಂತ ಇಹನಾತ ಮಿಂಚ ಮಸೆದು.

# ಮೈ

ಈ ಮೈಯೆ ಒಮ್ಮೆ ಇಡಿ ವಿಶ್ವವೆಂದು ನನಗೇಕೊ ತೋರುತ್ತಿತ್ತು.
ಈಗ ಜೀವದೀ ಹೊಟ್ಟೆ ಪೂರ್ತಿ ಎನಿಸುವದು ಎರಡೆ ತುತ್ತು.
ಜಗದ್ವ್ಯಾಪ್ಯದ ಸಂಚಲನಕೀಗ ಇದು ಸಣ್ಣದೊಂದು ಸಂಚಿ
ಬೃಹದ್ಭೂಮಿಯಲಿ ಬೃಹತ್ತರದ ಆದರ್ಶಕೆಂದು ಸಂಚಿ

ಒಪ್ಪಿಡಿಯ ಕವಳ ಏತಕ್ಕೆ ಸಾಕು ಅದು ಮಹಾಸುರದ ಭಿಕ್ಷೆ
ಅನಂತತೆಯ ಸಂತತಿಯನುಂಡು ತೀರಿತು, ಆ ಬುಭುಕ್ಷೆ :
ಆ ಬುಭುಕ್ಷೆ ಒಳಮಡಿಕೆಗಳಲಿ ತೂಷ್ಣೀಂಭಾವವಾಗಿ
ದೇವರಾಯುಸವು ಆಗಿ ಇಹುದು ಶಾಶ್ವತದ ಠಾವಿಗಾಗಿ.

ಅದರ ಇದಿರು ಮುಗಿದಿರದ ಹೊತ್ತು-ಗೊತ್ತಿಲ್ಲ ಮುಗಿಲ ತಬ್ಬಿ
ಮಾಡಿದ್ದೆ ಮಾಟ ಮುಟ್ಟಿದ್ದೆ ಚಿನ್ನ ಎನುವಂತೆ ಘಟನೆ ಹಬ್ಬಿ
ಹೃದಯವನು ಹೊಕ್ಕು ಬ್ರಹ್ಮಾಂಡವುಕ್ಕು ಉಕ್ಕುಕ್ಕು ಮಧುರಪೂರಾ
ಅದರ ಮನವು ಹಾಕುವದು ಎಣಿಕೆ ಧ್ರುವದಿಶೆಗೆ ದೂರ ದೂರಾ.

ಇಟುಕುಮನೆಯ ವಾಮನನು ಬೆಳೆದ ಹೇಗೋ ವಿಶ್ವಯೋಗಿ
ಈ ಪ್ರಪಂಚದೊಡನೊಡನೆ ಸಾಗಿ ವಿಶ್ವಾಕಾರನಾಗಿ.

# ಮುಕ್ತಿ

ನನ್ನ ಜೀವ ಮನ ಹಿಗ್ಗಿ ಹಿಗ್ಗಿ ಆಕಾಶಕಿಂತ ಅಗಲ
ಆವರಣರಹಿತವಾಕಾಲ ಮುಳುಗಿ ಉಂಡಿತ್ತು ಹರ್ಷ ಮಿಗಿಲ
ಸೃಷ್ಟಿಯ ಪಿಂಡ ಉಡುಗಿತ್ತು ಉಳಿದು ಜಲಲಿಪಿಯ ರೇಷೆಯಾಗಿ
ಆತ್ಮದೇಕಾಂತ ಚಿಂತೆಯಲ್ಲಿ ಸ್ಮೃತಿ ಮಾತ್ರ ಶೇಷವಾಗಿ.

ಬಣ್ಣ ಹಾರಿ ಅಡಗಿತ್ತು ವಿಶ್ವ ಸುತ್ತೆಲ್ಲ ಸೆರಗು ಹರಿದು.
ಶುಭ್ರತೆಯ ಏಕಸಾಮ್ರಾಜ್ಯದಲ್ಲಿ ಬೇಕೊಂದೆ ಚೆಲ್ಲವರಿದು
ಅಮೃತ ಮೂರ್ತಿ ನಟರಾಜನೊಂದು ಸೌಂದರ್ಯ-ಶಾಲೆಯಾಗಿ
ಅಮಿತವಾನಂದ ಪಡೆವ ವೈಶಾಲ್ಯದೊಡನೇ ವಿಶಾಲನಾಗಿ

ಹರ್ಷಪುಲಕ ಉಬ್ಬುಬ್ಬಿ ಹಬ್ಬಿ ಬ್ರಹ್ಮಾಂಡವುದ್ದ ತಾನ.
ಬೇರಿನಲ್ಲಿ ಇಂಗಿತ್ತು ಬುದ್ಧಿ, ಹಿಂಬಿಗ್ಗಿನಲ್ಲಿ ಭಾವ
ನಿರ್ಭ್ರಾಂತೆ ಶಾಂತ ಸುಸ್ತಬ್ಧ ದಾಂತ ಪರಿಣಾಮ ಆಲಿಸುವದು
ಸನಾತನವ ಆ ಶಾಂತಿ ಶಾಸನವ ತಾನೆ ಪಾಲಿಸುವದು.

ಅನಿರ್ವಾಚ್ಯವಾ ರಾಜ್ಯದಲ್ಲಿ ಬದುಕುವೆನು ಬಾಳಹಬ್ಬ
ಪ್ರಕೃತಿಯಾಟ ಮುಗಿದಿಹುದು ಈಗ ನಾ ಪುರುಷನೊಬ್ಬನೊಬ್ಬ.

# ಬೆಳಕು

ಬೆಳಕು ಬೆಳಕು ಕೊನೆಯಿರದ ಬೆಳಕು ಕತ್ತಲೆಗೆ ಖಣವೆ ಇಲ್ಲ.
ಪ್ರಾಣದಲ್ಲಿ ಅಜ್ಞಾತ–ಖಾತ ತೆರೆವುದು ರಹಸ್ಯವೆಲ್ಲ.
ಜಡದಗಾಧ ಆ ಖಾತ ಮುಂಚೆ ಮುಚ್ಚಿತ್ತು ತನ್ನ ನೆಲೆಯ.
ಲವಲವಿಕೆಯಲ್ಲಿ ಎತ್ತಿತ್ತು ಈಗ ಎತ್ತಿಹುದು ತನ್ನ ತಲೆಯ.

ಬೆಳಕು, ಹೊತ್ತಿರದ ಬೆಳಕು ತನ್ನ ತಾನಾದ ಅಚ್ಚಬೆಳಕು
ಪಾವಿತ್ರ್ಯಮುದ್ರೆಯಲ್ಲಿದ್ದ ಗೂಢ ತೆರೆದಿತ್ತು ತನ್ನ ಕದಕು
ಬೆಳಕು ಬೆಳಕು ಕಿಚ್ಚಿದ್ದ ಬೆಳಕು ಆನಂತ್ಯ ಹೃದಯರತ್ನ
ಎದೆಯಲೆನ್ನ ಪ್ರಸ್ಪಂದಿಸುತ್ತ ಅರಳಿದ ಗುಲಾಬಿ ನೂತ್ನ.

ಬೆಳಕೊ ಬೆಳಕೊ ನರನಾಡಿಯಲ್ಲಿ ತುತ್ತೂರಿ ಕುಣಿವುತಿದ್ದು
ಧ್ಯಾನಸ್ಥ ಬೆಳಕು! ಆ ಕಾವಿನಿಂದ ಜೀವಾಣು ತಣಿವುತಿದ್ದು
ಆನಂದ ಮುಗ್ಧ, ಸುಸಮಾಧಿಯಲ್ಲಿ ಪ್ರಜ್ವಲಿಸುತಿಹುದು ತೀರಾ
ಅಮೃತ ಸ್ಪರ್ಶ ನೆನೆವಂತೆ ರಸದಿ ನಾಂದಿಹವು ಪುಷ್ಪಸ್ತೂರಾ.

ದೀಪ್ತಿಸಾಗರದ ಬೃಹದ್ಗರ್ಭದಲಿ ಸ್ತಂಭದಂತೆ ನಿಂತೆ
ಮೂಲದಗ್ನಿಯನು ಮೇಲಿನಗ್ನಿಯಲಿ ಒಂದುಗೊಳಿಸುವಂತೆ!

# ಮಿಹಿರದ್ವೀಪ

ಸ್ವರ್ಣಸಮುದ್ರದಿ ಪಯಣಿಸಿಹೆ
ರಜತತೀರವನು ನೂಕಿರುವೆ
ಜ್ಞಾನಭಾಸ್ಕರನ ತಲುಪಿರುವೆ
ಇಳೆಯಿರುಳಭಿಜಿತ್ ಸೋಕಿರುವೆ.

ಸೃಷ್ಟಿದೀಪಿಸುವ ಕ್ಷೇತ್ರಗಳು
ಕೆಚ್ಚಿನ ಕಸುವಿನ ಬೆಟ್ಟಗಳು
ಹರ್ಷಜ್ವಾಲೆಯ ಶಿಖರಗಳು
ಕೇವಲ ಬೆಳಕಿನ ಗಾಳಿಯೊಳು.

ಆತ್ಮವಿಸ್ಮೃತಿಯ ಕಡಲುಗಳು
ರುದ್ರಸಿದ್ಧಿಗಳ ಗಿರಿದರಿಯು
ನನ್ನ ಜೀವದಾ ರಾಜ್ಯದೊಳು
ನಂದಾ ದ್ವೀಪಾವಳಿಗಳೊಳು.

ದೇವನೆ ದೇವ ಮೌನೋ ಮೌನ
ಕಾಲರಹಿತವಹ ಕಾಲದ ಲಯನ
ಅಲ್ಲಿ ಜೀವನವು ರಾಗದ ಮೂರ್ತಿ.
ಸತ್ಯ ವಿಚಾರವೆ ಛಂದಃಶಯನ

ಅಲ್ಲಿಯ ಬೆಳಕೇ ಸುತ್ತೂಮುತ್ತು.
ಇಲ್ಲಿಗೆ ಬಂದರು ಎತ್ತಲು ಇತ್ತು
ಅಮೃತ ಜ್ಞಾನವು ಇಳೆಗಿಳಿದಿತ್ತು
ಮೌನವ ಜನ್ಮದ ಗರ್ಭದಿ ಬಿತ್ತು.

# ಆತ್ಮಾರ್ಥಿ-ಸ್ವಾರ್ಥಿ

‘ ಅಹಂಕಾರರಹಿತ ನಾನು ಮುಕ್ತ ಆತ್ಮನಂದನು—
ಸುಡಲಿ ಊಟ ಬರದು ಏಕೆ ಕೂಡಲೆ ತಾನೆ'ಂದನು.
ಅವನಿಗೆಂದೆ ‘ ಏಕೊ ರೋಷ ? ’ ‘ ಎಂಥ ರೋಷ ಎವರದು ?
ಉದರದೇವ ಹಸಿದುಕೊಂಡ ಆ ಗರ್ಜನೆ ಅವರದು ! ’

‘ ಹೀಗೊ ’ ಎಂದೆ—‘ ಹೌದು ’ ಎಂದ ‘ ಎಲ್ಲ ಆಟ ಅವನದು
ಹಸಿಯೆ ನುಸಿಯೆ ನನ್ನ ಬದುಕು ಶುದ್ಧ ಸ್ವಯಂಭವನದು
ಏನು ಆದರೇನು ನನಗೆ ಇಂದು ನಾಳೆ ನಾಡಿದು ’
‘ ನಿಜವೊ ’ ಎಂದೆ ಅನ್ನರಾಗ ಎಳೆದು ಮತ್ತೆ ಹಾಡಿದು ?

‘ ಛಾ ’ ಎಂದಾ ‘ ನಿಮ್ಮ ಶಂಕೆ ನನ್ನ ತಲೆಗು ನೋಂಕಿತು
ಒಮ್ಮೆ ಮುಕ್ತ ಸದಾಮುಕ್ತ ಉಳಿದುದೇನು ಕೊಂಕಿತು ?
ಒದ್ದಾಡಿದೆ ಗುದ್ದಾಡಿದೆ ಕದ್ದಾಡಿದೆ ಆಗಲಿ
ಹಸಿವು ಹುಸಿವು ಕಸುವು ಕುಸಿವು ಹೇಗೊ ಹಾಗೆ ಸಾಗಲಿ

ಆತ್ಮಜ್ಞಾನ ಮುಕ್ತಗಾಸ ; ಉಳಿದ ತಾನ ಮಾನವು
ತಾಳ ಬಿಡಲಿ, ಮೇಳ ಕೆಡಲಿ ಅದರದೇಕೆ ಧ್ಯಾನವು ? ’

# ಸರ್ವಸಾಕ್ಷಿ

ಇಲ್ಲಿಹ, ಅಲ್ಲಿಹ, ಎಲ್ಲೆಲ್ಲೂ ಅವ ಮುಖಕ್ಕೆ ಪ್ರತಿಮುಖನಾಗಿಹನು
ಪದ್ಮಿನ ಕೋಟಿಯ ಗೋಡೆಯ ತನ್ನಯ ಬಲಭುಜದಲಿ ಸೈತಾಗಿಹನು
ನಾನೋ ಆಗಸೆಯ ಸೀಮೆಗೆ ನಿಂತು ದಿಟ್ಟಿಸಿ ನೋಡೇ ನೋಡುವೆನು
ಬಯಲು ಬಯಲು ನಿರವಯಲಿನಾಚೆ ನಾನನಂತ ಅನಂತ ತೋಡುವೆನು

ಒಡವೆ ಒಡವೆ ಒಮ್ಮುಗ್ಗಲು ಕಾಂಬುದು ಅಗ್ಗಲು ಹಿಗ್ಗಲು ಭೂಭೂಮಾ
ಅದರ ಕಿಟಕಿಯಿಂದಿಣಿಕಿ ನೋಡಿದರೆ ಕಾಂಬೊಲವೆಲ್ಲವು ನಿಃಸೀಮಾ
ಸೆರೆಮನೆ ಎನುವುದು ಏತಕೊ ಒಡಲಿಗೆ ಕಾಂಬುದು ಅರಮನೆ ತುಣುಕು ಅದು
ಕೀಲುಕೀಲದಲಿ ಪೀಲುಪೀಲಿನಲಿ ರನ್ನದ ಕಣಕಣ ಮಿಣುಕುವದು

ಒಡಲು ನನ್ನದೋ ಒಡವೆಯು ಅವನದು ಉಸಿರವನದು ನಾ ಬರಿ ಹೆಸರು
ಜೀವನೋದಗಳ ಪಯರಿನಲ್ಲಿಯೂ ಹಚ್ಚಗೆ ಎಸೆವುದು ಆ ಹೆಸರು
ಚಿರಂತನದ ಒಪ್ಪೆಸುಸ್ರೋಲು ಜನನದ ಘನಘನ ಮಾಲೆಯು ಸಾಗುವುದು
ನನ್ನ ಮರಣ ಅವನಮರತೆ--ಸೇರುವ ಸೇರುವೆ ಬಾಗಿಲವಾಗುವುದು

ಆಳ ಆಳ ಪಾತಾಳ ರಸಾತಳ ಕಾವಣದೊಳೊ ಎನೆ ಬಾಳುವನು
ಪೂಜೆಯಿಲ್ಲದಾ ಪೂಜ್ಯನು ಹೃದಯದಿ ಪ್ರಾ--ನಗೆ ಮುಗುಳಿಸಿ
ತಾಳುವನು.

# ಅದ್ವೈತ

ಚಂದ್ರಶೈಲದುನ್ನತಿಯ ರಾಜವೀಥಿಯಲಿ ಅಬ್ಬ ಬಂಡೆ
ಆದಿ ಶಂಕರರ ಚಿಕ್ಕ ಗುಡಿಯೊಂದ ಕಟ್ಟಿದಂತೆ ಕಂಡೆ–
ಹೊತ್ತು ಮುಗಿದ ಮುಮ್ಮೂಕ ತುದಿಗೆ ಆನಂತ್ಯದಿದಿರುಕಡೆಗೆ
ಇಹದಭಂಡ ಕಥೆ ಮುಗಿಸಿದಂತೆ ಪಾಳಿನಲಿ ಒಂಟಿನಡಿಗೆ

ನಿರಾಕಾರ ಏಕಾಂತ ತಂತು ಸುತ್ತುತ್ತಲಿತ್ತು ನನ್ನ
ಹೆಸರಿ ಕೊಡಬರದ ಹೊಸದೆ ಏನೂ ಇತ್ತಲ್ಲಿ ಜಗದ್ಭಿನ್ನ
ಅಂಕುರಿಸದಿಪ್ಪ ಏಕೈಕ ಸ್ವೈಜ ಜಗಮೂಡದಂತೆ ನಗ್ನ
ಅಚಲ ಅಚಲ ಬೇರಿಲ್ಲ ಬುಡಕೆ ; ಶಿಖೆಯಿಲ್ಲ ಅಗ್ರ ಭಗ್ನ.

ಸದ್ರೂಪವೆಲ್ಲ ನೆಲಿಸಿಹುದೊ ಮೌನನಾಮವನೆ ಧರಿಸಿ ಮಾತ್ರ
ಹಾದಿಯಿರಲಿಲ್ಲ ಆದಿಗೂನು ಕೊನೆಯೂನು ಧ್ವನಿಗಪಾತ್ರ
ದೃಷ್ಟನಷ್ಟ ಕ್ಷಣದಲ್ಲಿ, ಶ್ರುತವು ಅಶ್ರುತದಿ ಲಯಿಸಬಹುದು.
ನಿರ್ವಚನದಾಚೆಯಾ ಶೃಂಗದಲ್ಲಿ ರಾರಾಜಿಸುತ್ತಲಿಹುದು.

ಅಕ್ಷುಬ್ಧವಾದ ಏಕಾಕಿ-ಶಾಂತಿ ಅವಿಚಲಿತ ಶೂನ್ಯವೆಲ್ಲಿ.
ಪ್ರಕೃತಿದೇವಿಯಾಂತರ್ಯಗೂಢದಾ ಮೂಕ ಶಿಖರದಲ್ಲಿ.

# ಮಾನವ-ಬೌದ್ಧಿಕ ಪ್ರಾಣಿ

ಆ ಅಸೀಮದಾ ಸಂಚುಹೊಂಚಿನಲಿ ಒಂದು ಕ್ಷುದ್ರ ಘಟಕ
        ವೈಶ್ವಾನರನ ಆವರ್ತನೃತ್ಯರಂಗದಲಿ ಸಣ್ಣ ಚುಟುಕ.
ಬಟಾಬಯಲು ಇದು, ಹೋ ಅಭಂಡ ತಾನರ್ಥಹೀನ ಹಳವು
        ಆಕಸ್ಮಾತ್ತೋ ಎನುವಂತೆ ಬಂತು ಭೂಮಿಯಲಿ ನರನ ಫಲವು.

ತನ್ನ ನರೆತ ಅಜ್ಞಾನದಲ್ಲಿ ತಾನೆರೆತ ಒಂದು ಪ್ರಾಣಿ
        ನೆರಳು ಬೆಳಕು ಅರ್ಥಾನರ್ಥವಿಪಿನದ ಮನ; ಬದುಕಿನೊಂದು ಕಾಣಿ
ಮರ್ತ್ಯಲೋಕದೀ ಬಂದಿ, ತಿಳಿವ ಶ್ವಾಸೋಚ್ಛ್ವಾಸ ಹರುಷ.
        ಹೇಗೊ ಬಾಳುವನು ಕುಂಟುಕೂರಿಗೆಯ ಕ್ಷಣಿಕ ನೂರು ವರುಷ

ಆದರೇನು ಆಂತರ್ಯ ಪ್ರಗತಿ ದೈವಿಕದ ಇಚ್ಛೆಫಲವು
        ಅಚಿನ್ತ್ಯದ ಅಜ್ಞಾನ ಸಿರೆಯ ಚೇತನದ ಜೊಕ್ಕ ಬಲವು
ಬರುವೆ ಎನ್ನುತಿದೆ ಪರಂಜ್ಯೋತಿ ಸಾಕ್ಷಾತ್ಕರಿಸಿಕೊಂಡು
        ಆ ಅದೃಷ್ಟ ನಿಷ್ಕರುಣ ಶಕ್ತಿಗಳನಿದಿರು ಎದುರುಗೊಂಡು

ಅಚಿತ್ತಾದ ಈ ಮಣ್ಣಿನಲ್ಲಿ ದಿವ್ಯತ್ವದೂರ್ಧ್ವಭಾವ
        ಕಾಂಬೆನೆನ್ನುವದು ಮಂದಗತಿಯೊಳೇ ಚಿರಂತನದ ಜಾವ.

# ಸಾಕ್ಷಿ ಮತ್ತು ಚಕ್ರ

ಯಾರಣ್ಣ ನೀ ಬಿಡುಗಣ್ಣನೇ । ಎದೆಗೆಳೆಯ ! ಕುಳಿತಿಹೆ ತಣ್ಣನೇ
ಮಾನವನ ಕರ್ಮವ ಬಿಮ್ಮನೇ । ಸುಖದುಃಖ ನೋಡುವೆ ಸುಮ್ಮನೇ

ಸಂತಾಪ ಜಾಲಕೆ ಅದರದೇ । ಮರಣಕ್ಕೂ ವಿಧಿಗೂ ಬೆದರದೇ
ಕುರುಡು ಜಗ ಉರುಳುವುದ ಕಾಯುವೆ । ಸಾಕ್ಷಿ ಕಣ್ಣೂ ನೋಯುವೇ ?

ಈ ವಕ್ರಚಕ್ರದ ಜೊತೆಗೆ ನೀಃಸಹನಂತೆ ಏತಕೊ ತಿರುಗುವೇ
ಯಾ ಕಲ್ಪ ತವ ಸಂಕಲ್ಪವೋ । ಈ ಹೃದಯ ದುಡಿಸಿದೆ ಸ್ವಲ್ಪವೇ

ನೀ ನಿಲ್ಲದೇನೂ ನಿಲ್ಲದೋ । ಚಿರಕಾಲದಲು ಅನುಭಾವಿಯೋ
ಜಡ ಪ್ರಕೃತಿ ನಿಯಮಿತ ಪ್ರೇರಣೆಯ ಬಿಟ್ಟಿನ್ನು ಜೀವನ ತೊಳೆವೆವು

ಹುಲು ಎದೆಯ ವಾಸನೆ ತೊಳೆವೆವು । ನಿನ್ನಂತೆ ಪರಿಣತಿಗೊಳುವೆವು
ಎಂದಿನಂತೆಯೆ ಹಿಂದಿನಂತೆಯೆ ಪ್ರಕೃತಿರಥವೋ ಸಾಗಲಿ

ತನ್ನ ರತಿಕೃತಿ, ಭಿನ್ನ ಗತಿಸ್ಥಿತಿ, ಅಂಥ ರೀತಿಯೊಳಾಗಲಿ
ಈ ಇಹದ ರಾಗದ್ವೇಷ ಈ ಸುಖದುಃಖ ಜಲಲಿಪಿಮಾನವು

ಏನಿಲ್ಲ ಅರ್ಥವು ವ್ಯರ್ಥವಿದು ಗುರಿಯಿರದ ಜಗ-ಸೋಪಾನವು
ಆಗೊ ಪುರುಷನೋ, ಅದು ಆತ್ಮವೋ, ಆ ಜೀವವೋ ಕಾಯುತಲಿರೆ

ಆಕಾಶವ್ಯೂಹಪರಾಕ್ರಮುಕ್ಕದೊ ಕಾಲತತಿ ಸಾಯುತಲಿರೆ
ಶಮದ ಸೀಮೆಯೊಳಚಲವಿರುವೆವು, ನಿಯತಿ ಮರಣವ ನೂಗಲಿ

ನೀನಾರು ಹೇಳೈ ಸಾಕ್ಷಿಯೇ, । ನಾನಾರು ನಿನ್ನೊಡನಾತನು
ಈ ಲೋಕಚಕ್ರವ ಕಾಲದೇಶದಿ ಕಾಂಬ ನಾಮಾತೀತನು ?

# ಪುನರ್ನವ

ಹೃದಯವು ದಣಿವಿಲಿ ನವೆದಿತ್ತು, । ಸ್ಪಂದಕೆ ಮರೆವೋ ಕವಿದಿತ್ತು
ಎಲ್ಲವು ಇತ್ತೆಂದಾಗಿತ್ತು, । ಮುಂದಕೆ ಇನ್ನಿಲ್ಲೆನಿಸಿತ್ತು
ಬಿಲ್ಲೇ ಕಳಚಿದೆ ಕೈಯಿಂದ, । ಹೆದೆ ಹರಿದಿದೆ ಒಳಹುರಿಯಿಂದ
ಕೈಗಳ ಹಿಡಿತವೆ ಸಡಿಲಾಗಿ, । ಎನಿಸಿದೆ ಆಗದು ಒಂದಾಗಿ
ಪ್ರಾಣಲಿಂಗವೇ ಹೊರಟಿರಲು, । ಹೊಸ ಮೈ ಹೊಸ ಜನ್ಮವೆ ಬರಲು
ಮುನ್ನೋಡದ ಹೊಸ ಹೊಸ ದೇಶ, । ಹೊಸ ಮುಖಗಳ
ಹೊಸ ಹೊಸ ವೇಷ

ಬಿಲ್ಲೇರುವದೇ ಗುರಿ ನೋಡಿ, । ಹೆದೆ ಹೊಂದಿಸಿ ಬಾಣವ ಹೂಡಿ
ವ್ಯರ್ಥ ಕರ್ಮಹತ ವಿಧಿ ವಕ್ರ, । ಮುಗಿವುದೆ ಪ್ರಾರಬ್ಧದ ಚಕ್ರ ?
ಕಾಲವು ಜೀವಗಳಗಲಿಸಿರೇ, । ಮತ್ತೆ ಅವರು ಒಂದಾಗುವರೇ ?
ಪ್ರೇಮವು ಹತವಾಗಿರೆ ವಿಕಲ । ಮರುಮೈ ಮಾಡುವದೇ ಸಫಲ ?
ಇಂದ್ರಿಯಗಳು ಅದ ಬಂಧಿಸವು, । ಎದೆಯ ತಂತಿಗಳು ಸಂಧಿಸವು
ಮರೆತಿದೆ ಪೂರಾ ಮುನ್ಮನವು, । ಅವರು ಆತ್ಮಕೆ ಘನ ನೆನೆವು.

# ಸ್ವಪ್ನನೌಕೆ

ಓ ಸ್ವಪ್ನಾಗ್ನಿಸ್ಪೃಷ್ಟಾ ನೌಕಾರೂಢಾಽ ಗೂಢಾ
ಯಾರವನೋ ಚಿರತರುಣಾಽ ಬಂದಾ
ಹುಬ್ಬೋ, ಅನಂಗನು ಚಿತೆಯಲಿ ಮಣಿಸಿದ ಕಬ್ಬೋ
ಆಹಾ ಈ ಕಾಯಾ ಹಿರಣ್ಯಾಽಽಗರ್ಭಚ್ಛಾಯಾ
—ಆಕೃತಿಬಂಧಾ
ಮೌನಾ ಕರಗಿಸಿ ಎರೆದಾ, ಸೆಳೆಮಿಂಚಿನ ತೆರದಾ,
ಸವಿನುಡಿ ಛಂದಾ—
'ಆ ಹೃದಯ ಜ್ವಾಲಾ ಮಾಲಾಽಲಂಕೃತಾ ಯಜ್ಞಾ ಸಿದ್ಧವೇನೇ ?
ಕಂಕಣಾ ಬದ್ಧವೇನೇ ?
ಬಂದೆನೇ ! ಬರುವಿಯೇನೇ ? '—ಎಂದಾ

ಅರರೇ, ಗದಗದನೇ ಏನೋ ನಡುಗಿತ್ತೋ—ನಡುಗಿತ್ತೊ
ಎದೆಗೂಡಿನ ಹಿಂದೇ
ಏನೇನೋ ಅಡಗಿತ್ತೋ—ಅಡಗಿತ್ತೊ
ನೆನವೇ ಸನೆಕೊನೆಹೋಗಿ ಪಲ್ಲವಿಸಿತೊ ಜೀವನವೃಕ್ಷಾ
ಆವೋಽದ ಲಿಂಗಽ ಪಡಪಡಿಸಿತು ಪ್ರಾಣದ ಪಕ್ಷಾ
ಪ್ರತಿಬಿಂಬಿತವಾಯ್ತೋಽ ಭಗ್ಗನೇ, ಸ್ಮೃತಿಸಾರದ ಸಾತ್ತ್ವಿಕ ಲಕ್ಷಾ
ಓಹೋ ಹೋಯಿತೋ ಹಡಗಾ, ಬಂಗಾರದ ಹುಡುಗಾ
ಹೃದಯದ ದೇವಾ !—
ತಾಳೆನೇ ನೋವಾ.

ಟೊಳ್ಳೋ! ಈ ಜಗವೆಲ್ಲಾ ಬಯಲಿನ ಡೊಗರು
ಬದುಕಾಗಿದೆ ಹಗುರು
ಒಲವಿಲ್ಲಾ ಬಾರನು ನಲ್ಲಾ, ಹಳೆ ಹಿಗ್ಗಿಗೆ ಮೂಡದು ಚಿಗುರು
ಬರದೋ!, ಬರದೆನಿಸದೆ ಎಂದೂ ಬರದು
ಕಿಸಲಯ–ನಯ ಹೋ!ಗಿದೆ ತರಿದು
ಬರಿದಾಗಿದೆ ಒಳಗೂ ಹೊರಗೂ
ಆ ರುಕ್ಮಾಂಗದ ದೇವನ ಕನಸೂ ಬರಿದಾಗಿ
ಕನಸಿನ ಹಡಗಾ! ಬರದಾಗಿ.

# ಹುಲಿ ಮತ್ತು ಹುಲ್ಲೆ

ಮಿಂಚಿ ಚಕಮಕ, ಬಾಗಿ ತೂಗುತ ಮಣಿದು ಬಳುಕುತ ತಡೆದಿದೆ
ಕಾಮಬೆಟ್ಟದ ಪಚ್ಚೆ ಹೃದಯದಿ ಏನು ನುಸುಳುತ ನಡೆದಿದೆ
ನಯನ ನಿಗಿನಿಗಿ ಎದೆಯ ದೃಢಪಡೆ ಏನೊ ನಾತವ ಹಿಡಿದಿದೆ
ಕಳ್ಳಹೆಜ್ಜೆಯ ಮೆಲ್ಲನಡಿಗೆಯ ಘಾತಸಂಭ್ರಮ ಪಡೆದಿದೆ
ಎಲೆಯ ಸಂದಿಗಳಿಂದ ಜಳಕನೆ ಹರಿದ ಮರ್ಮರ ಗಾಳಿಯೆ
ಮೊದಲೆ ನಿರ್ದಯವಾದ ಅದ್ಭುತ ಮತ್ತೆ ಕೆರಳಿಪರೆಂತೆನೆ
ಉಸಿರನಡಗಿಸಿ ಭಯದಿ ನಡುಗುತ ಕಾಣಕಾಣುತ ಜಾರಿದೆ
ಮಹಾಮೃಗವಗೊ ಹೇಗೆ ಸಾಗಿದೆ ಬಾಗಿ ನಯಭಯಮಯದಲಿ
ಸೌಮ್ಯ ಸೌಂದರ್ಯವನು ನಶಿಸಲು ರೌದ್ರ ಸುಂದರ ನಯದಲಿ.

ಮುಗ್ಧ ಮೃಗವಧು ತನ್ನ ಕಾಲಿಲೆ ಮರಣವಿದ್ದೆಡೆ ಸಾಗಿದೆ
ಬನದ ತಣ್ಣೆಳಲಲ್ಲಿ ತಿಳಿಗೊಳದಲ್ಲಿ ನಿರ್ಭಯ ಬಾಗಿದೆ
ಪಾಪ, ಸಂಶಯವೆಂಬುದೇ ಗೊತ್ತಿಲ್ಲ ನಂಬುಗೆ–ಜೀವಕೆ
ಆಚೆ–ಈಚೆಗೆ ನೋಡದೇ ನಾಲಗೆಯ ಚಾಚಿರೆ ತೇವಕೆ
ಹಾರಿ ಜಿಗಿದಿತು ಮೇಲೆ ಒಗೆದಿತು ಹುಲಿಯು ಹುಲ್ಲೆಯ ಹೀರಿತು
ಅಯ್ಯೊ ಬಿದ್ದಿತು, ಭಕ್ಷ್ಯವಾಯಿತು, ಆಯಿತೋ ಬಾಳಾಯಿತು,
ಗಹನ ಗುಹೆಯಲಿ ಒಂಟಿ ಇಹ ಸಖನನ್ನೆ ನೆನೆಯುತ ತೀರಿತು
ಅದೇ ಸುಖದಲಿ ಮೃತ್ಯುಮುಖದಲಿ ಹುಲ್ಲೆ ಓ ಹಾಳಾಯಿತು
ಹಾರಿ ಜಪ್ಪಿಸಿ ಕೊಲುವ ಕೌಶಲವಿರಲಿ ಆರ್ಭಟಿ ಇಂದಿನ
ಆದರೂ ಬಂದೀತು ಎಂದೋ ಹುಲಿಯೆ ಲಯವಾದೊಂದಿನ.

ನೆಲವ ಲಟಲಟ ಮುರಿಯೆ ಮೆಟ್ಟಿದ ಪೆಡಂಭೂತಗಳೆಲ್ಲಿವೆ ?
ನೆರಳ ತಂಗೊಳ ಜಲವ ಕುಡಿದುಳಿದಾವು ಹರಿಣಗಳಿಲ್ಲಿಯೇ !
ಪ್ರಬಲ ಬಲಿಯೇ ತನ್ನ ಬಲಭರಭಾರದಲ್ಲಿಯೆ ಮಡಿವನು
ಬದುಕಿನೊಡೆಯನು ಸತ್ತ್ವನೆನಿಸಿದ ಸತ್ಯಸಂತತಿ ಜೀವನು
ಕೊಲ್ಲಬಲ್ಲವ ಮೆಲ್ಲಮೆಲ್ಲನೆ ಮೃತ್ಯುಪಂಥವ ಹಿಡಿವನು.

# ಪ್ರತೀಕ್ಷಾ-ಸಮಾಧಿ

ಬ್ರಹ್ಮಾಂಡಕೆ ಕಾವ್ ಕೊಡುತಿದ್ದೇ, ಒಬ್ಬೊಂಟಿಗ ಶಮ-ಶಿಖರದಲೂ
ಮುತ್ತಿತ್ತೋ ಗುಜುಗುಜು ನಾದಾ

ಝುಗಝುಗಿಸುವ ನಿದ್ದೆಯೊಳದ್ದೇ, ಮಾನಸವನು ಸುತ್ತಿವೆ ಎತ್ತೂ
ಮರ್ಮರಿಸುವ ನಿರ್ಭರ ಮೌನಾ.

ಚಿರಶುಭ್ರ ಜ್ವಾಲಾ ಗೂಢಾ, ಮನನಕ್ಕೆ ಪ್ರಾಪ್ತ ಪದಾರ್ಥಾ
ಜಿನುಗುಡುತಿದೆ ಅಸ್ಫುಟ ನಾದಾ

ದೃಕ್‌ಪಥಕತಿಗೋಚರಸೀಮಾ, ಪಡಿದನಿಸುತ್ತಿಹುದು ಅಲೀನಾ
ಜಡವಾದದ ಗಾಢ ವಿವಾದಾ

ಯಃಕಶ್ಚಿತ್ ಛಾಯಾವಿಹಗಾ, ಪಕ್ಷಾಹತ ಚಂಚಲವಾದಾ
ನಿಸ್ತೇಜಿತ ಪಲ್ವಲದಂತೆ,

ಕೆಳಕೆಳಗೋ ದೂರವಿದೂರಾ ಆಕ್ರಾಮಿತರಾಗ ವಿಭಂಗಾ
ಆಜೀವನ ಜಲಧಿ ಅಪಾರಾ

ಲಗುಬಗೆ ಬಗೆ ಚಕ್ರಾಕಾರಾ ಹಾರಾಟವ ನಿಲಿಸಿದೆ ಪೂರಾ
ಸ್ವನಿವೃತ್ತವೊ ಸ್ವಾಂತವಿಚಾರಾ

ನಿಸ್ತಬ್ಧಾ ನಾಡಿಸ್ಪಂದಾ, ಈ ಅಸ್ಮಿತೆ ಶಾಂತಾ ನಿಷ್ಠಾ
ಅದ್ಭುತ ವಿಶ್ರಾಂತಿ ಸ್ನಾತಾ,—

ಅವಲೋಕಿಸ ಬಂದಿದೆ ಜ್ಞಾನಾ, ವಿಜ್ಞಾನದ ಮೀರಿದ ಮಾನಾ
ಆ ಮಾನಸ ಪ್ರಮೆಗೆ ಅಮೇಯಾ

ತುಂತುಂಬಿದೆ ತೂತೂಬಿನೊಳು, ಚೈತನ್ಯದ ಘನ ಅವಕಾಶಾ
ಸತ್‌ಸಾಕ್ಷಾತ್ಕಾರ ಪ್ರಕಾಶಾ,

ಕಂಪಿಸುತಿದೆ ಸಂವಿತ್ತಾಗ್ನಿ, ಪುಲಕಿಸುತಿದೆ ತಂತಾನಾಗಿ
ಸ್ವಾಧಿಷ್ಠಾನಪ್ರಭಾವಾ,

ಭೂದೇವಿಯ ನೂತನ ಪಾತ್ರಾ ಸಮಾಧಿಯೇ ಕಾಂಚೀದಾಮಾ
ಸ್ವರ್ಗಾಂಬರ ವಸನ ಸಮಾನಾ
ಶಾಶ್ವತತೆಯ ಹೆಬ್ಬಾಗಿಲೊಳು, ದಿವ್ಯಪ್ರಭೆ ಪಕ್ಷಗಳಾದ
ನಿಯತಿಯು ಶುಭನಿದ್ರಾಮಗ್ನಾ
ಕಾಲನಿರೀಕ್ಷಾಶೂನ್ಯಾ, ಚೇತಿಸುವಾ ವಿದ್ಯುಲ್ಲೇಖಾ
ವೈವರ್ತಿಕ ಮಂತ್ರೋತ್ಸೇಕಾ,
ಪಾರ್ಥಿವ ಗೃಹ ಸರ್ಜನ ಸಿದ್ಧಾ ಅವಕಾಶಾವಸ್ಥಿತ ದೇವಾ
ಯೋಗಾಲಂಬಿ ಸ್ವಭಾವಾ
ಚಿರಂತನದ ಪಾದಾರ್ಪಣಕೆ ಆದೇಶಾಗಮನಾರ್ತಸ್ಥಾ
ಪ್ರತೀಕ್ಷಾಪೇಕ್ಷ ಬುಭೂಷಾ
ಬೀಸಿತ್ತೋವೋ ಸಂಭಾವ್ಯಾ, ಆನಂದ ರಾಗಾಲಾಪಾ
ಆನಂತ್ಯದ ಸಾಗರದಿಂದಾ.

# ಆತ್ಮದ ದೃಶ್ಯ

ಮೋಡಗಳೊರಗಿವೆ ನಿರ್ವಾಸಿತವಾದಾಕಾಶದ ಅವಕಾಶದೊಳು
ಆಲಸದಲಿ ದಣಿವಾದವೊಲು
ಗತಿಸಿದ ಕಡಲಿನ ನೆರೆ ತೆರೆ ಅವಲೋಕಿಸಿ ಸುತ್ತಾಡುತ್ತಿವೆ ಖಿನ್ನ
ಉರುಳುರುಳುತ್ತಿವೆ ಅವಸನ್ನ
ಬರಿ ಚಿಂತೆಯೊಳೋ ಕರಿ ಕರೆ ಚಾಚಿದೆ ಶೋಕಾಕುಲತೆಯೆ ಮುಸುಕಿದೊಲು
ವಾಯವ್ಯದ ಉಸಿರಾಟದಲು
ಅಗೊ ಅದರಾಚೆಗೆ ಅಡಕಿಲವಾಗಿವೆ ವಿಷಾದದಲಿ ಹಲ ದಿನ್ನೆಗಳು

ಪ್ರಕೃತಿಯಲ್ಲಿ ಏಕಾಕಿಯಾದ ಆ ಆತ್ಮದ ವಿಸ್ಫಾರಿತ ಭಾವ
ರಿಕ್ತವಾದ ಹುಸಿಪುಸಿ ಜಾವ
ಗರ್ಭಿತಾರ್ಥದಲಿ ಕೆತ್ತಿದಂತೆ ಇರೆ ನೆಲದ ಮುಖಕೆ ಮೊಗವಾಡವಿದೆ
ವಿಕಾರದಲಿ ಕೊರೆದಂತೆ ಇದೆ
ಸ್ತಬ್ಧಮನೋದಯ ಮಾನವ ಹೃದಯ, ಆಧ್ಯಾತ್ಮಿಕ ಅನುರಾಗದಲಿ
ಇದಿರಿಸುತಿದೆ ಸಂಸ್ತ್ಯಾಗದಲಿ
ವಿಜನ ವನದ ಹತ ಪ್ರತೀಕ್ಷೆಯನ್ನೇ ಅನುಕರಿಸುವ ಆಕಾರದಲಿ

ಎತ್ತಿರಿಸದೆ ಅಗೊ ನಿಂತಿದೆ ಕಾಮು, ಸಹಸ್ರರಶ್ಮಿಯ ವರಕಾಗಿ
ಬಂಗಾರಕು ನೀಲಿಗು ಆಗಿ
ಸಾಗರ ಗೀತದ ಮಂಥರ ಸುಂದರ ಮಂಗಲಮಯ ಧ್ರುವಪದಗಾನ
ಸುಖಸಂಚಲ ತಾನವಿತಾನ
ಗಭೀರ ತಲದಲಿ ಮಾನವನಾತ್ಮದಿ ದಿವ್ಯಪ್ರಭವಿಸ್ಫೋಟನಕೆ
ಅಂತರ್ಗತ ಉದ್ಘಾಟನಕೆ
ಸ್ವಪ್ರತಿಬಿಂಬವ ಮೂಡಿಸಿದಾಗಃ ಹಿಗ್ಗಾದೊಲು ದೇವನ ಮನಕೆ

# ಐಕ್ಯಸಾಗರ

ಇಗೋಽಽ ಈ ಮೌನಾ ಸುತ್ತೂಮುತ್ತೂ ಜಗವಗಲಾ ವಾಚಾತೀತಾ
ಶ್ವೇತಾಽಽ ಶುಭ್ರಾ ಸ್ಥಿತಾ ಖಗಮಾಲಾ ಸಾಗರಮಗ್ನಾಽ
ದಿಗಂತೋಡ್ಡೀನಾ ಲೀನಾ
ನಿಃಶಬ್ದಾಕಾಶವ್ಯಾಪ್ತಾಽ ನಿರ್ನಾದಾ ಪಾರಾವಾರಾ
ನೀಲಾಂತರ್ನೀಲಾ ಅಗಾಧಾಽಽ ಅನ್ಯೋನ್ಯಾ ಸಾಕ್ಷೀಮೂಕಾ
—ಇಗೋ ಈ ಮೌನಾ.

ಗುರುಗಮ್ಯಾಽ ಅನಂತಾನಂತಾ ಏಕಾತ್ಮಾ ಏಕೋರಾಮಾ
ಈ ವಿಶ್ವಾಶ್ಲಿಷ್ಟಾ ಪುರುಷಾ ಶ್ರೀ–ವಿಶ್ವಾಕಾರ ಪ್ರಾಪ್ತಾ
ದೃಷ್ಟಾಽ ಅದೃಷ್ಟಾಽ ಸರ್ವಾಽಽ ನಿಜಬೀಜಾಂಕುರಿತಾ ಭರಿತಾ
ಒಂದೇ ಇಮೋ ಮಹೋದಾರಾ, ಒಂದೇ ಒಂದೇ ಬೃಹದಾಕಾರಾ, ಅಪಾರಾ
— ಅಹೋ ಈ ಮೌನಾ

ಇದು ಯಾರೋ ಏನೋ ಧ್ಯಾನಾಸಕ್ತಾ ವಿದೇಹಃ ನಾಮಾತೀತಾ
ಅಸ್ಮಿತ್ವಾಸ್ತಿಕತಾಲಗ್ನಾ ಏಕೈಕಾ ಅಮೃತಃ ಭೂಮಾ
ಓ ಸ್ಥಾಣೋ, ಶಾಶ್ವತಾ, ಸಮಾಧಿಪ್ರಜ್ಞಾ, ಕೇವಲಾಽಸೀಮಾ
ಆಃ ಸತತಾ ವಿತತಾ ವಿವಿಧಾ ಲೋಕೈಕೇ ಹೃದಯೇ ಮಗ್ನಾ
—ಓಹೋ ಈ ಮೌನಾ.

# ಅಗ್ನಾಯಿ

ಅಗ್ನಾಯಿ !  ಇನ್ನು ಆಲಿಂಗಿಸೆನ್ನ
ಓ ಜಾತವೇದಜಾಯೆ
ಗಂಧ–ಪಕಳೆಗಳು ಎಂದೊ ಉರುಳಿದವು
ಕೊಂದೆ ಕಾಮಮಾಯೆ
ತೆಕ್ಕೆಯಲ್ಲಿ ಮುತ್ತೆನ್ನ ಜೀವನವ
ಜ್ಯೋತಿಲಲಿತೆ ನಲ್ಲೆ !
ಬಯಕೆ ಸುಟ್ಟೆ ಆ ದುಗುಡ ಬಿಟ್ಟೆ ಹಿ–
ಗ್ಗನ್ನು ತಾಳಬಲ್ಲೆ
ಮೋದಮೂರ್ತಿ ! ಪುಲಕಿಸುತ ಬಾರ ಆ-
ನಂದದೇಕ ಪ್ರತಿಮೆ
ಮೊಗದ ಬೆಡಗಿನಲಿ ನಾಟಿ ಹೀರುವೆನು
ಮುತ್ತಿನೊಂದೆ ಮಹಿಮೆ
ದಿವ್ಯಧ್ವನಿಯೆ ಹೃದಯದಲೆ ನುಡಿಸು ಆ-
ನಂದದೇಕ ತೂರ್ಯ
ಮುದ್ರೆ ಹಾಕು ತವ ತೇಜ ಸೆಲಿಸು ಓ
ಪ್ರಾಣಪೂರ್ಣ ಸೂರ್ಯ

# ಉರಿಗಾಳಿ

ಅಗೊ ಬಂಗಾರದ ಮೂಡಲದಿಂದ ಬೀಸಿತು ಉರಿಗಾಳಿ
ಏಕ್ಮಡಿ ಮಧ್ಯಾಹ್ನದ ಉಸಿರಿಂದ ಸನ್ನಾತ್ಮಕೆ ದಾಳಿ.
ಯಕ್ಷರ ಪಕ್ಷ್ವ ತಾಳಿ ಓಡುವೀ ಪಶು ನಾಗಾಲಾಗಿ
ಹೊತ್ತಿದೆ ಮಾನಸ, ಹೊತ್ತಿದೆ ದೇಹ, ಎದೆ ಮೂರ್ಛಿತವಾಗಿ

ಮಧ್ಯಾಹ್ನದ ಬಲಶಕ್ತಿಯ ತಂದೆ ಉರಿಯೋ ನಿರ್ಬಾಧಾ
ಎಲ್ಲಿದೆ ಬೆಳಗಿನ ತಲ್ಲೀನತೆ ಪ್ರಕೃತಿಯ ಝುಳುಝುಳುನಾದಾ
ಎಲ್ಲಿದೆ ಬೆಳುದಿಂಗಳ ತಿಳಿನೀಲಿಯ ಲೋಕಾತೀತ ಸುರೆ
ಏತಕೆ ಈ ಮೈ-ಮನದ ಪ್ರಫುಲ್ಲತೆ ಹೃದಯವೆ ನರಳುತಿರೆ ?

ಪ್ರಾಣದ ರಕ್ತಜ್ವಾಲೆಯು ಮತ್ತೀ ಮನಸಿನ ಬಂಗಾರ
ಸ್ವರ್ಗವು ಝಗಝಗ ಈ ಭೂ ಧಗಧಗ ಇದೆ ದೀಪ್ತಾಂಗಾರ
ಹೃದಯದ ಬಿಳಿಪೋ ಆ ಗುಲಾಬಿಯೋ ಆಗಿರೆ ನಿಃಸತ್ತ್ವ
ಹೋಗೆಲೆ ಉರಿಯೇ, ಮೌನದೊಳಿರುವೆ, ಬರಲಿ ಪ್ರೇಮತತ್ತ್ವ

# ಸಮಾಪತ್ತಿ

ನನ್ನ ಉಸಿರು ಹರಿದಾಡುತಿಹುದು ಇಗೊ ಸೂಕ್ಷ್ಮ ಛಂದದಲ್ಲಿ;
ನನ್ನ ಅವಯುವದಿ ಬೆಳೆಯುತಿಹುದು ಭಗವಂತ ಶಕ್ತಿ—ವಲ್ಲಿ :
ಆನಂತ್ಯವನ್ನು ನಾ ಕುಡಿದೆ ಎತ್ತಿಯಾ ಅಸುರ-ಸುರಾ-ಪಾತ್ರೆ
ಕಾಲಲೀಲೆಯದು ನನ್ನ ನಾಟಕವು ನನ್ನ ಸ್ವಪ್ನಯಾತ್ರೆ

ಈಗ ನನ್ನ ಜೀವಾಣುಗಣವು ಪ್ರಪ್ರಮೋದಾಗ್ನಿ ರಚಿತ
ರೋಮ ಹರ್ಷಕನುಕೂಲ ನಾಡಿ ನರಜಾಲ ಸೂಕ್ಷ್ಮಖಚಿತ
ಪುಲಕ ಪಾರದರ್ಶಿತ್ವ ಹರ್ಷವಾಹಿನಿಯೆ ಸ್ಫೂರ್ತಿಗಾಗಿ
ಆ ಅಗಮ್ಯದಾ ಪರಾಶಕ್ತಿಯಾ ಪ್ರಕೃತಿಪೂರ್ತಿಗಾಗಿ

ದೇಹದಾಸ ನಾನಲ್ಲವೆಂದಿಗೂ ಇನಿಸು ಇನ್ನುಮೇಲೆ
ಪ್ರಕೃತಿ ಜೀತದಾಳಾಗಿ ದುಡಿಯೆ ನಾ ಬಿಟ್ಟೆ ಜಡದ ಶಾಲೆ
ಗಂಡು ಮೀರಿ ನಾ ನಿಂತೆ ಇನ್ನು ಇಂದ್ರಿಯದ ಇಂದ್ರಜಾಲ
ದ್ರಷ್ಟಾರ ದೃಷ್ಟಿ ಕ್ಷಿತಿಜವನು ಹರಿದು ಮಿತಿಮೀರಿದೊಲು ವಿಶಾಲ

ನನ್ನ ದೇಹ ಸುಖಭರಿತ ದೇವನಾ ಪ್ರಾಣಪೂರ್ಣಯಂತ್ರ
ಬೃಹದ್ಭಾನುವಿನ ಅಮರಜ್ಯೋತಿ ಚೇತನವು ಆತ್ಮತಂತ್ರ.

# ಸಮಾಧಿ

ರಜತ ರಶ್ಮಿ ಪ್ರಸ್ಫುರಿತಕಿರಣೆ ಯಾರಿವಳು ತಾರಕೆಯು ದಿಗಂಬರೇ
ದೃಷ್ಟಿ ಕ್ಷಿತಿಜದಲಿ ತೇಲಿ ಬಹಳು ಗುಡಿಗಟ್ಟಿಗೊಂಡ ಸೋಮಾವಸರೆ
ತಿಳಿ ನೀಲಿಮ ಬಾನಂಚಿನ ಕರೆಗೆ ಪ್ರಭಂಜನವೇ ಅಡಿಕಿಲವಾಗೆ
ಇಗೊ ಜಡಜಲಧಿಯ ಪಸರವ ಮುಸುಕಿದೆ ಶಮ ಮೂರ್ಛೆಯ ಹಾ

ಮನವೋ ಅಸ್ಮಿತೆಯನು ಮುಟ್ಟಿತ್ತುಸ್ಪಂದ ಸಮಾಧಿಯಲಿ
ಹೃದಯ ಮಾನಸದಲಿ ಗುಪ್ತವಾಗಿ ಸಾನಂದ ಗರ್ಭವಾಗಿ
ವಿವಿಧೇಂದ್ರಿಯ ಪ್ರಸ್ಫುರಣ ನಾಟ್ಯದಾವರಣ ಹರಿದು ಹೋಗಿ
ಮೂಕ ವ್ಯೆಯೊಳಾವುದೊ ಒಲೆ ಹೊತ್ತಿತು ಝಗ್ಗನೆ ಪ್ರಭೆಯಾ

ಸರ್ಗಸುಸಜ್ಜೇ ಓ ತಾರಗೆಯೇ ನಿರ್ಮಲೆ, ಸ್ವಚ್ಛಂದೇ
ಅಜ್ಞಾತಾನಂದಾಬ್ಧಿಯೊಳೆನ್ನಾ ಪರಿವೇಷಿತ ಚಂದ್ರೇ
ಪುರೋಭಾವಿಯಾದಾತ್ಮ ಪರಿಣತಿಯದಿಮೊ ಝಂಝೋಚ್ಛ್ವಾಸ
ಏಕಮೇವ ಆನಂದ ಸಾಗರದ ಆತ್ಮಲೀನವಾಸ.

# ಪ್ರಯಾಣದ ಕೊನೆ

ದಿನವು ಮುಳುಗಿತು ಬೆಳೆದು ಚಾಚುತ ಇರುಳ ಸಂಜೆಯ ಲಯದಲಿ
ಉದ್ದೋ ಉದ್ದಿನ ಹಾದಿ ಮುಗಿದಿದೆ ಸ್ವಲ್ಪ ಉಳಿದಿದೆ ಮಾರ್ಗವು
ಇನ್ನು ಒಣ ಒಣ ರಣದ ಭಣಭಣ, ಇನ್ನು ಮೌನಾಶ್ರಯದಲಿ
ಬಂತು ಕತ್ತಲು ಗೋಡೆ, ನಡೆ ನಡೆ, ಆದರ ಹಿಂದೆಡೆ ಸ್ವರ್ಗವು.

# ಕಿಂಚಿತ್ ಶೇಷ

ಇನ್ನೊಂದೆ ದಿನವು, ಹೋದೀತದೀಗ ಅರೆಸತ್ತ ಕಾರ್ಯ ಮುಗಿದು.
ಹೌದೊಂದೆ ದಿನಕೆ ಅರಳೀತು ಮೊಗ್ಗೆ ಹುಟ್ಟೀತು ಪಕಳೆ ಬಗೆದು.
ಇನ್ನಿಷ್ಟೆ ಹಾದಿ ದಾಟದರೆ ಬಂತು ಹೊಸ ಜಗದ ಗುರಿಯು ಪೂರ್ತಿ.
ತೀಡಿದರೆ ಒಮ್ಮೆ ಮೂಡೀತು ನೋಡು ಭಗವತಿಯ ಪೂರ್ಣ ಮೂರ್ತಿ.

ಗುಡ್ಡ ಬೆಟ್ಟುಗಳ ಮೆಟ್ಟಿ ಮೀರಿ ಕೊನೆವರೆಗೆ ಬಂದೆನಿಂದು
ಅಗೊ ನೋಡು ಅಲ್ಲಿ ಹುಬ್ಬನ್ನು ಚಾಚಿ ಇದಿರಿಸುವದೇನೊ ಒಂದು
ಬ್ರಹ್ಮಾಂಡ ಬಂಡೆ ಇದ ಮೆಟ್ಟಿದವರು ಆಗಿಲ್ಲವೀಗು ಸ್ವಾಮಿ
ಇನ್ನೊಂದೆ ಹೆಜ್ಜೆ, ಆ ಮುಂದೆ ಬಾನು ಬೆಳಕೆಲ್ಲ ದೇವಭೂಮಿ.

# ಅಜ್ಞಾನ-ಮಗ್ನಾತ್ಮ

**ನಿ**ದ್ದೆಯಲ್ಲಿ ಬಿದ್ದೇಕೆ ಆತ್ಮವೇ ಏಳು ಆಳದಿಂದ
ಏಳು ಏಳು ಜಗದಗ್ನಿಲಿಂಗವೇ ದೇವಕಿರಣದಂಡ
ಎತ್ತು ನಿನ್ನ ಮನ, ಎತ್ತು ಹೃದಯಘನ, ಏರು ಯಶದ ತೆಂಗು
ತಿಮಿರ–ಗರ್ಭದರ್ಭಕನೆ ಸೂರ್ಯನೇ 'ತತ್ತ್ವಮಸಿ'ಯ ಸುಂಗು

**ಏಕ** ವಿಶ್ವ, ಸರ್ವಾತ್ಮಸೃಷ್ಟಿಯೇ ಏಳು ಯೋಗದಿಂದ
ಜಡಪ್ರಕೃತಿಯಲಿ ಏಕೆ ತಿರುಗುತಿಹೆ ಮೂಕಚಕ್ರದಂದ
**ದೇ**ವಜನಿತ ನೀನೆನಿಸಿ ಏಳು, ತಿಳಿ ನೀನು ಮರಣರಹಿತ
ಕಾಲ ಮೀರಿ ನೀ ಮರಳು ನಿನಗಹುದು ಅಮರ-ಪಟ್ಟ ವಿಹಿತ.

# ಮಹಾಲಕ್ಷ್ಮಿ

ಕಮಲವನ ಸಂಚಾರಿಣಿಯೆ ಮಹಾಲಕ್ಷ್ಮಿ ಬೇಕೇ ಆಸನ
ಅರುಣಚರಣೇ ಮಾಡು ನನ್ನೀ ಹೃದಯವನೆ ಸಿಂಹಾಸನ

ವಿಶ್ವಸುಂದರಿ ನಿಖಿಲಜಗದಾನಂದಕರಿ ಹೇ ಯೋಗಿನೀ
ವಿರಸ ಹೃದಯತ್ಯಾಗಿ ನೀರಸ ಭಕ್ತಿ ಬಂಧನ ಭೋಗಿನೀ

ಪಾಪದೂರೇ ಮಾಡು ನನ್ನನು ನಿನ್ನನುಗ್ರಹದಾಗರಾ
ಮಧುರ ಕೌಶಲ ಮಾಯೆಯಲಿ ಮಾಡೆನ್ನ ಪ್ರೇಮದ ಸಾಗರಾ.

# ಪ್ರಾಣಾಂಗನೆ

ಆನಂದ ತನುಜೆ, ಅನುಭೂತಿಯನುಜೆ, ಅದ್ಭುತಪವಾಡದಂತೆ
ಓ ಜಾತಿವಂತೆ ನನ್ನಿದಿರು ಧ್ಯಾನದಲಿ ಮುಗ್ನಳಾಗಿ ನಿಂತೆ
ದಿಗ್ದಂತಿದಂತ ಚಾಚಿರುವನಂತದಾಚೆಯಲಿ ನಿನ್ನ ಚೂಚು
ಏನು ಹಾರಿಕೆಯು ದೌಡು ಇಡುವೆ ಆ ಚಿರಂತನದ ಕೂಚು.

ಗಗನ ಶಿಖರಕೇರುತ್ತ ನಡೆದೆ ಹೇ ಗಗನ ದೇಹ ಪಡೆದೆ
ಖೇದ ಮೋದಗಳನೆರಡು ತೋಳಿನಲಿ ತೂಗಿ ತೂಗಿ ಹಿಡಿದೆ
ಇಗೊ ಇತ್ತ ಮೃತ್ಯು ಅಗೊ ಅತ್ತ ಅಮೃತ ಎರಡಕ್ಕು ನಡುವೆ ಇರುವೆ
ನೋವು ಸಾವುಗಳ ಕವಳ ಮಾಡಿ ಹಿಗ್ಗಿಗ್ಗಿ ಬಾಯಿದೆರೆವೆ.

ಘನನಿಬಿಡವಾಗಿ ಆಲಿಂಗಿಸೆನ್ನ ತುಸು ಕೂಡ ತೆರವು ಬೇಡ
ಬಾನಗಲ ನಿನ್ನ ಎದೆ ಹರವುಗೊಳಿಸಿ ಹೃದಯವನೆ ತುತ್ತು ಮಾಡ
ಓ ಭೀಮಕಾಯ ನಿರ್ಮಾಯ ಮುಖವೆ ಹಿಂಜರಿವುದೇಕೆ ಇನ್ನು ?
ಮೂರ್ಛೆಮುಸುಕು ತೆರೆದೆರಗಿ ಬಾರ ಕ್ರೀಡೆಯಲಿ ಇದುವೆ ಚೆನ್ನು.

ತೊಟ್ಟು ಕೂಡ ಬಿಡದಂತೆ ಸವರಿ ಹಿಗ್ಗನ್ನು ಹುಡುಕಿ ಕುಡಿವೆ
ಕಚ್ಚು ಚುಚ್ಚು ಎದೆ ಹೊಚ್ಚು ಬಿಚ್ಚು ; ಮೆಚ್ಚಿದ್ದ ಮಾಡಿ ಬಿಡುವೆ
ನರಸಿಂಹನಂತೆ ಬಸಿರನ್ನೆ ಹೊಕ್ಕು ಕರುಳುಗಳ ಮಾಲೆ ಸೂಡಿ
ಮಧುಮಾಸ ಮತ್ತಮಧುಕರನ ಹಾಗೆ ರಸ ಸರಸ ವಿರಸಮಾಡಿ

ಏನು ತಾನು ಮಾಡಿದರು ನಾನು ದಾನವನ ಹಾಗೆ ಹೀರಿ
ಅಭಿಮಾನಿ ದೈವ ಬರುವೊಲು ಸದೈವ ಆನಂದ ಮೇರೆ ಮೀರಿ
ಮಾನವನ ಮೈಯಿ ಯಾತಕ್ಕು ಸೈಯಿ, ನಾನಿರುವೆ ಪ್ರೇಮದಂತೆ
ಶಿವ–ರತಿಯ ತಕ್ಕೆಯಲಿ ನಲಿವ ಉಲಿವ ಚಿರಬಾಲ ಕಾಮನಂತೆ.

ನಾ ಬೇಡಲೇನು ನೀ ಕೊಡುವದೇನು ? ವ್ಯಾಪಾರ ಸಾಕು ಬಲ್ಲೆ
ಆ ದೈವದತ್ತ ಈ ಮೊಗದ ಮುತ್ತ ಸುತ್ತುತ್ತಲಿರುವೆ ಇಲ್ಲೆ
ಅರಸಾದರೇನು ಆಳಾದರೇನು ಆನಂದ ಭೋಗದಲ್ಲಿ
ಬಾಳಾದರೇನು ಹಾಳಾದರೇನು ಈ ಪೂರ್ಣಯೋಗದಲ್ಲಿ.

ಅಧಃಪಾತದಲಿ ನೆರೆದು ಬರುವೆ ಗಂಗಾವತಾರದಂತೆ
ಜೀರ್ಣವಸ್ತ್ರದಲಿ ಮಿಂಚಿ ತೆರೆವೆ ಸುರ ಸುಮನ ಹಾರದಂತೆ
ಮೂರ್ತ ಮೃತ್ಯುಮುಖರಂಗದಲ್ಲಿ ನರ್ತಿಸುವೆ ಅಮರನಂತೆ
ತೊತ್ತುಳಿದರೂನು ಥಥ್ಥಳಿಸಿ ಹೊಳೆವೆ ಸಂಜೀವ ಭ್ರಮರನಂತೆ.

# ದಿವ್ಯಶ್ರುತಿ

ಎಲ್ಲ ನಾದದಲಿ ಎಲ್ಲ ದನಿಗಳಲಿ ದೇವವಾಣಿ ಜಾಗು
ಹಾಡು–ಪಾಡು ಗುಡುಗಾಟ ಮತ್ತೆ ಕುಹುಕಾಟ ಕೇಕೆ ಕೂಗು.
ಹರ್ಷಶೋಕವಲಿ ಮಿಕ್ಕಿಬರುವ ಜೀವನದ ತೊದಲು ಬದಲು
ವೈಖರಿಯ ಗಮಕ, ಗುಂಗುಣಿಸಿ ಬರುವ ಸವಿನುಡಿಯ ಯಮಕಗಳಲು.

ಕಡಲ ಮೊರೆತ ಕುಣಿಕುಣಿವ ನೊರೆಯ ತೆರೆತೆರೆಯ ಅಟ್ಟಹಾಸ.
ಗಾಳಿತೀಡು ರೆಕ್ಕೆಗಳ ಬೀಸಿ ಹರಿಗುಡುವ ಜವವಿಲಾಸ.
ಭೂಮಿ ಸುತ್ತಿ ತುತ್ತೂರಿ ಬರುವ ಬಾನುಲಿಯ ತೂರ್ಯನಾದ
ಯಂತ್ರ ಗಿರಣಿ ಎದೆಗುಕ್ಕಿ ದುಃಖ ಭಯವುತ್ರ ಘಂಟೆ ನಿನಾದ.

ಆಕಾಶವಾಣಿ ಮಾರುತರ ಓಣಿಓಣಿಯಲಿ ಶಂಖ ಊದಿ
ದೇವಹೃದಯಕೂ ಜೀವಜೀವಿಯೆದೆಗು ಮಾಡುತಿಹುದು ಹಾದಿ.
ರವಿತೇಜ ಕಂಡ, ಹುಲಿಸಿಂಹನುಂಡ, ಮನೀಷೊ ನೆನವು ಜನಿಸಿ
ಭವ್ಯಬಂಧದಲಿ ದಿವ್ಯಛಂದ ವೇದ-ಪ್ರಬಂಧವೆನಿಸಿ.

ಅಂಧ–ಹೃದಯದಲಿ ನುಸುಳುತಿಹುದು ಸವಿ ನಾಳಮೇಳವಾಗಿ.
ನೀನೆ ದೇವ! ಓ ಜೀವ ಭಾವ! ಎನೆ, ಚೆಲುವಿಗಾಗಿ ಮಾಗಿ.

# ಉತ್ಕ್ರಾಂತಿ

ಹೊಕ್ಕೆ ನಾನು ಅಚಲಪ್ರಸನ್ನಪ್ರಾಸಾದಸೌಧ ಒಂದು.
ಸ್ಫಟಿಕಮುಕುರ ಪ್ರತಿಬಿಂಬ ಎಂಬ ತೆರ ಕಂಡೆ ದಿವ್ಯ ಅಂದು.
ನಾಗಮೋಡಿಯಲಿ ಏರುತಿತ್ತು ಏನೋ ಪುರಾಣಶಕ್ತಿ,
ಯುಗದಜುಗದ ತಿರುಪಣಿಯ ದಾರಿಯನು ಸಾವಕಾಶ ಹತ್ತಿ.

ಜನ್ಮಮರಣದಜ್ಞಾನಬಂಧ ಜೋಕಾಗಿ ಬಿಡಿಸಿಕೊಂಡು
ಮುಕ್ತಮನವು ಈಸಾಡುತಿತ್ತು ಹಿರಿ ಬೆಳಕುಕಡಲ ಕಂಡು.
ಕ್ಲಿಷ್ಟ ಕೃಷ್ಣಗತಿ ತೊರೆದು ಹೊರಟಿತ್ತು ಪ್ರಾಣಜೀವರೀತಿ.
ಶಿಲಾ—ಗರ್ಭವನು ಬೆಳಗಿಸಿತ್ತು ನಾ ಕಂಡೆ ಜಡ-ಜ್ಯೋತಿ.

ಜೀವವನನುಭವಿಸುತಿತ್ತು ಆನಂತ್ಯದೊಂದು ಅಚ್ಚುಕಟ್ಟು
ಭಕ್ತಿಹೃದಯ ಪಡೆದಿತ್ತು ಭಗವದಾನಂದ ಸೊತ್ತು ಬಿಟ್ಟು.

# ನಿರ್ವಸ್ತುಭಾವ

ಅಧಃಪತಿತ ನಿಃಸೀಮ ಆತ್ಮದೆಚ್ಚತ್ತ ಶಕ್ತಿ ಒಂದು
ಇಲ್ಲತನದ ಕೊನೆ-ಮೊದಲುಗಳಲಿ ಅರೆಅರವು ಮರವುಗೊಂಡು
ಇದು ಬಿಡಿಸಬರದ ಕಗ್ಗಂಟು ಕೂಟ ಜನ್ಮದ ರಹಸ್ಯವೆಂದು
ಅತಿಸಾವಕಾಶಗತಿಯಲ್ಲಿ ನಡೆದ ವ್ಯತಿರೀತಿ ಮನಕೆ ತಂದು

ತಾನು ಬಂದ ಘನ ಅಂಧಗರ್ಭವಾಸವನೆ ಮರಳಿ ನೆನಿಸಿ
ಇಲ್ಲವೆಯ ಬಯಲ ಬಯಸಿತ್ತು ಅದುವೆ ಆಲಯವು ಲಯಕೆ ಎನಿಸಿ.
ಅಜ್ಞಾತದೊಂದು ಹೋಲಿಕೆಯನುಳ್ಳ ಮುಕ್ಕಾದ ಮೂಕಮುಖವು
ಮರವೆ ತುಂಬಿರುವ ಮಾಟಗಳನೆ ಮರಮರಳಿ ಮಾಡುತಿತ್ತು.

ಕುರುಡು ಕಲ್ಪವನೆ ಬರಡುಹಾದಿಯಲಿ ಎತ್ತೊ ದೂಡುತಿತ್ತು
ಪ್ರತಿಪದಾರ್ಥಗಳ ಉಗಮ ಅಡಗಿದೊಲು ತಮದ ಆಳದಲ್ಲಿ

# ಸಾವಿತ್ರಿ

( ಕೆಲವು ಸಾಲುಗಳು )

ಕಾಂಬನೊಬ್ಬ ಒಳಗಿಹನು ಬಲ್ಲನೋರಣದ ಹಂಚು-ಸಂಚು.
ಅದು ಕಾಣದಣ್ಣ ಕಾಲಲ್ಲೆ ಇದ್ದು ಅಡಿಗಡಿಗು ಅದರ ಅಂಚು.
ಊದಿ ಉಸಿರನುಬ್ಬಿಸುವನೆಮ್ಮ ಕಣ್ಣಾಚೆ ಶಿಖರಗಳಿಗೆ
ಹುಟ್ಟು-ಬಾಳುಗಳ ದರಿಗೆ ನೂಗಿದೊಲು ಹಿಂದೆ ಒಮ್ಮೆ ನಮಗೆ
ಕಾಲಪಥಿಕನಾ ಕಿವಿಗೆ ಮುಟ್ಟಿತಾ ಕರೆಯು, ಕೇಳಿ ಸೊಲ್ಲ
ಒಂಟಿಯಾಗಿ ಏಕಾಂತಿಯಾಗಿ ಅದರಾಳವವನೆ ಬಲ್ಲ.
ಹೊರಟ ಯಾತ್ರಿ ದಿಕ್ತಟದ ಶಕ್ತಿಯಲಿ ಮೂಕಮುಗ್ಧನಾಗಿ.

* * * *

ಕಾಲ-ಜನಿತ ಮಾನವರ ಈ ಜ್ಞಾನ ಇತ್ತು ಮೊದಲು ಅವಗೆ
ಬೆಳಕು-ಮನದ ತೆರೆ ಸರಿದು ಹಿಂದೆ ಅವ ಹೊಕ್ಕನಾಗ ಒಳಗೆ.
ನಮ್ಮ ಬಗೆಗೆ ಕೇವಲದ ಕಣ್ಗೆಮರೆಯಾಗಿ ಮುಸುಕ ನಡುವೆ
ಗೂಢಗವಿಯ ಅವ ಕಂಡ, ಮತ್ತೆ ಮುಂದಾ ರಹಸ್ಯದ್ವಾರ
ಆತ್ಮನೊಳಗಿನಾ ದೃಷ್ಟಿ ದಾನದಾ ಬಾವಿ ಅದರ ಬಳಿಗೆ
ಅಲ್ಲಿ ಇತ್ತು ಶ್ರೀವಿಜಯಪಕ್ಷಿ ಕಾವ್ಗೊಡುತ ಧ್ಯಾನಲೀನ
ಇಲ್ಲ ಬೆಳಕೆ ಆಕಾಶ ಸರ್ವಸರ್ವತ್ರ ಜ್ಞಾನತಾನ.
ಪ್ರಾಣಸ್ಪಂದನವು ನಿಂತುಬಿಟ್ಟರೂ ಸಾವು ದುಮುಕ ಸಲ್ಲ.
ಉಸಿರು ಹಿಂಗಿಯೂ ಬಗೆಯು ಇಂಗಿಯೂ ಆತ ಬದುಕಬಲ್ಲ.

* * * *

ದೇವರೆಚ್ಚರಿವ ಉದಯರಾಗ ಬ್ರಾಹ್ಮೀಮುಹೂರ್ತದಲ್ಲಿ
ದಿವ್ಯಘಟನೆ ಘಟಿಸುವದು ಇತ್ತು ಆ ದೇವಯಾನದಲ್ಲಿ
ತನ್ನ ಶಾಶ್ವತಿಯ ಗರ್ಭಗುಡಿಯ ನಿರ್ದೀಪ್ತ ಐಕ್ಯವಲ್ಲಿ
ಮೌನದಂಚಿನಲಿ ವ್ಯೋಮ ಚಾಚಿ ಮಲಗಿತ್ತು ಮಿಸುಕದಾಗಿ.
ನಿಶೆಯ ಮಹಮನವು ಏನೊ ಮುಂಗಂಡು ಸ್ವಯಂ ಲೀನವಾಗಿ.
ಅನಿರ್ಭೇದ್ಯವಿದು ಇದು ಅಪಾರ ಎನಿಸುವವಗಾಧ ಚಿಂತೆ
ಆ ಅಮೂರ್ತ ಆನಂತ್ಯದಾಳ ಪಾತಾಳಖಾತ ಬಂತೇ
ಕಣ್ಣು ಮುಚ್ಚಿದಾ ಧ್ಯಾನಗಮ್ಯ ಸಂಕೇತ ಚಿತ್ರದಂತೆ.

# ಆರೋಹ

## ೧. ಮೌನ

ಮೌನಾಃ, ಮೌನಾಃಃ, ಮೌನಾಃಃಃ ಮೌನ–ವಿಮಾನಾರೂಢಾ
ಅಮೃತಾತ್ಮಾ, ತರ! ಉತ್ತರ! ಭೋಃ ಉರ್ಧ್ವೋರ್ಧ್ವೋರ್ಧ್ವ, ಭೋ
ಈ ಮಾಯಾಮಂಡಲ ಮುರಿಯೋ, ದಾಟೈ ಆ ತಿರ್‍ರನ ಚಕ್ರ
ಏರೈ, ಏಕಾ, ಏಕೈಕಾ ಮರಣೋತ್ತೀರ್ಣಾ
ಫೂಃ! ಪಿಸುಪಿಸು ಮಾತೋ ಮಾತು, ಇರುಳಿರುಳಿನ ಭುಂಭೋದ್ಗಾರಾ
ಕರೆ, ಕರೆನರೆ ಕಿರಿಕಿರಿ ಲೋಕಾ
ಬಿಡು ಶೋಕಾ, ಉಳಿದೊದ್ವಾಟಾ
ಚಿರಮೌನದಿ ಹೊಗು ಹೊಗು ಏಗೂ ಮೇಗೂ.
ವಿಶಾಲಾ, ಅಚಲಾ, ಅಕ್ಷರಾ, ಅರೂಪಾ, ಅಸ್ಪೃತಭೂತಾ
ಸ್ವರ್ಗೋಪರಿ ಸ್ವರ್ಗಾ, ಅಗಲಾ ಬ್ರಹ್ಮಾಂಡಕು ಮಿಗಿಲಾ,
ಶುದ್ಧಾ, ವಿಶುದ್ಧಾ, ಸತ್ತ್ವಾ ಮಹಿಮಾಮುಗ್ಧಾ
ಸ್ವಾನ್ವೀಕ್ಷಕ ಸೋಜ್ವಲ ಸ್ತಿಮಿತಾ
ಅಸೀಮಾ, ನಿರೋದ್ಗಾರಾ, ಸಾಕ್ಷಾತ್ ಸಂವಾದನಶೀಲಾ
ಮಾಡೈ ವಿಚಾರಾತೀತಜ್ಞಾನಾ, ಪಡೆ ಅಕ್ಷೋಭ್ಯಗಭೀರಾಮೋದಾ
ಅವಿಕಾರಿತ ಜ್ಯೋತಿಯೊಳಿರು ವಿಶ್ರಾಂತಾ, ಮೂಕಾ,
ನಿಶ್ಶಬ್ದಿತಸಾಕ್ಷಾತ್ಕಾರಾ
ನಿನ್ನನ್ನೇ ಮೀರೈ ಆತ್ಮಾ, ಪ್ರಕೃತ್ಯೋತ್ತರಪುರುಷಾ
ಓ ಸಾಕ್ಷೀ, ಕಳೆದುಳಿ ಉಳಿ ಕಂಡದ್ದೆಲ್ಲಾ
ಕಾಣೈ, ಕೇವಲಾ, ಬ್ರಹ್ಮಾ, ಶಾಶ್ವತಾ
ಸನಾತನ ಮಾತ್ರಾ, ಶಾಂತಾ, ಮೌನೋನ್ಮಾನಾ
ಓ ಲೋಕೋತ್ತಮ ನಾಮಾತೀತಾ, ಏಕಾ
ಭೌಮಾಮೃತ ಆತ್ಮಾ.

## ೨. ಮೌನಾತೀತ

ಉನ್ಮಜ್ಜೋನ್ಮಜ್ಜ, ಹೇ ಮೌನನಿಮಗ್ನಾ,
ಅವರ್ಣ್ಯಾದ್ರವ್ಯಸ್ವಭಾವಾ,
ಪ್ರಭಾವಾ, ವಿಭಾವಾ, ಸಹಿತಾ
ಆರೋಹಿಸು ಭೋ ಅಮೃತಾತ್ಮಾ
ಕಾಲಕೆ ಕೊಡು ಚಿರತರ ಅರ್ಥಾ
ಕಾಲಾತೀತಾಲಿಂಗಿತಾ ಭವ ಮಾಧುರ್ಯೋದರ ಪ್ರವಿಷ್ಟಾ
ಶಾಶ್ವತಿಯಲಿ ಬಾಳ್ವೆ ಜಾಗೃತಾ, ಅನಂತಪ್ರೇಮೋದ್ಭೂತಾ
ಪೂರ್ಣಾಪೂರ್ಣಾಪೂರ್ಣಾ ಸ್ವಪ್ರಾಪ್ತಾ ಆಪ್ತಾ ಪೂರ್ತಾ
ಪ್ರಿಯಹೃದಯೇ ಸಂಪ್ಲುತಸ್ವರಸಾ
ಇದು ಯಾವುದೊ ಬ್ರಹ್ಮಾತೀತಾ, ಬ್ರಹ್ಮಾಂತರ್ಜಾತಾ, ತ್ರಾತಾ
ಸ್ವರೂಪಾ, ರೂಪಾರೂಪಾರೂಪಾ, ಬಹುರೂಪಾ, ಭೂಪಾ, ಜೇತಾ
ಲೀಲಾವಿಗ್ರಹಾ, ಆಹಾ ಚಿರಸಂತತಿ ಸಂತತಜನಿತಾ
ಪ್ರಕೃತಾ ವಿಕೃತಾ ಕೃತಕಾ ಕೃತಕೃತ್ಯಾ ಧನ್ಯಾಮೂರ್ತಾ
ಸುಂದರಾ, ಸುಬಂಧಾ, ಸುಗಮಾ, ನಿಗಮಾತೀತಾ
ಹೃದಯೇ ಹೃದಯಾಂತರ್ಹೃದಯೇ ಲಗ್ನ: ಪರಮಾತ್ಮೇಮುಗ್ನ:
ಸಾಕ್ಷಿನ್, ದೃಷ್ಟಂ ತ್ಯಜ, ದೃಷ್ಟಂ ತ್ಯಜ
ಭಜ ಸ್ವಾಂತಂ ಏಕಾಂತಂ ಏಕಂ ಬ್ರಹ್ಮ ಚಿರಂತನಂ
ಆಃ ಲೋಕಾತೀತಾ, ಅನಾಮಾ ಏಕೈಕಾ
ಓ ಮಹದ್ಭೂತಾ, ಅಮೃತಾ!
ಭವಮೌನೀ, ಶಾಂತೋಽನಂತೋಽನಂತಃ

# ಪ್ರಾಣದೇವತೆಗಳ ಪರಮಸ್ವರ್ಗ

ಮಧುಮಧುರವಾದ ಹಿರಿಹಗಲು ಒಂದು ಬೆಳಗಿತ್ತು ಅವನ ಸುತ್ತು.
ಹರ್ಷಾವತರಣ ಆನಂತ್ಯದಿಂದ ಪ್ರಭೆ ಬೀರಿದಂತೆ ಇತ್ತು.
ಬಂಗಾರನಗೆಯ ಹೊಂಗಾವಲಲ್ಲಿ ಮೆರೆದಿಹವು ಸುಖದ ಬೀಡು,
ಬಿಡುಗಡೆಯ ಪಡೆದ ಒಳಗಡೆಯು ಎದೆಯು ಹವಹದುಳವುಳ್ಳ ನಾಡು.

ಆದೇವದೇವನಾ ಸೋಮರಸವು ಮೈಗಿಳಿದ ಮತ್ತಿನಲ್ಲಿ
ಎಂದೆಂದು ತನ್ನ ದಿವ್ಯತೆಯಲುಳಿದು ಮುಳುಗಿಹುದು ಬೆಳಕಿನಲ್ಲಿ.
ಎಲ್ಲ ದೇವರಿಗೆ ಮುದ್ದುಬಹದು, ಬಲು ಸಲುಗೆಯಲ್ಲಿ ಬಳೆದು.
ಹಿಗ್ಗಿನೊಂದೆ ಕಾಯಕದೊಳಿಹುದು ಅದು ದೇವನಾಜ್ಞೆ ತಳೆದು.

ತನ್ನ ತಾನೆ ಆಳುವದು ತನ್ನ ಸ್ವಾನಂದದಲ್ಲಿ ಬಾಳಿ
ಆದರ ಬಲದ ಸ್ವಾರಾಜ್ಯಗಳಲಿ ಅರಸೊತ್ತು ತಾನೆ ತಾಳಿ.
ಎಲ್ಲ ರೂಪಗಳು ಯಾವ ಮೋದವನು ನೆಮ್ಮಿ ನೆಚ್ಚಿ ಇಹವು
ಕ್ಷಣ–ಕ್ಷಣಕು ಅಳಿವಂಥ ಕಾಲಕೂ ಬೆಚ್ಚಿಬೆದರದಿಹವು.

ಮುತ್ತಲರಿಯದೆಂದೆಂದು ಅದನು ಪ್ರತಿಕೂಲ ಸ್ಥಿತಿಯು ಕೂಡ.
ಇಂಥ ಸಹಜ ವಿಶ್ರಾಂತಿಯಲ್ಲಿ ಅದು ವಿಲಸಿಸುವದು ನೋಡ.
ಆ ಮರಣಕೌತಣವ ಕೊಡುವ ಮೈಯ ಕ್ಷಣಭಂಗುರತ್ವವಿಲ್ಲ.
ಅಡಿಗೊಮ್ಮೆ ಎಡವಿ ಭಯದಲ್ಲಿ ಇರುವ ಸಂಕಲ್ಪವಲ್ಲಿ ಸಲ್ಲ.

ಆ ರಾಗಭೋಗದಾವೇಗಗಳನು ಬಿಗಿಹಿಡಿವುದಲ್ಲಿ ಏಕೆ ?
ಸಂತೃಪ್ತವಾದ ಸುಖದೊಂದು ತಕ್ಕೆ ಇರೆ ಬೇರೆ ಪುಲಕ ಬೇಕೆ ?
ಅಬ್ಬಬ್ಬ ಏನು ಅದ್ಭುತದ ಓಟ, ಕುಡಿಬೆಂಕಿ ನೋಟ, ಕೂಗು
ತನಿಪ್ರಾಣದೂರ್ಮಿ ನಿಗಿನಿಗಿಯೆ ಹರಿವ ನೆತ್ತರಿನ ತುಂಬು ತೇಗು.

ಆದು ಇಹುದು ದೇವನಗೆಯಲ್ಲಿ ಒಗೆದ ನವರತ್ನನಗರದಲ್ಲಿ
ಒರಗಿಹುದು ಎದೆಗೆ ಬೆರಗಾಗಿ ಪ್ರೇಮ ಹರಿದಿರಲು ಆಗಿ ಬಳ್ಳಿ.
ಅದಕಾವ ಬಂಧ ? ಸ್ವಚ್ಛಂದದಿಂದ ಆನಂದ ಕೀರ್ತಿಸುವದು ;
ಬಿಸಿಲೊಡ್ಡು ಮೈಯ್ಸಿ, ಬೆಳುದಿಂಗಳುಣಿಸಿ, ಜ್ಯೋತಿಯನೆ ಮೂರ್ತಿಸುವದು.

## ಪೆರುಮಾಳನ ಕೆಂದಾವರೆ

ಪೆರುಮಾಳನ ಕೆಂದಾವರೆ ಅರಳಿದೆ ನಸುನಕ್ಕೆ !
ಹರಿನೀಲದ ಬಾನೊಳಗಿನ ಸಿಂಧೂರದ ಚುಕ್ಕೆ.
ನಲಿವಿನ ನಲಿನವು ತಾನೇ ತಾನಾಗಿಯೆ ಬಿಚ್ಚಿ
ಏಳ್ಮಡಿ ಧಾಳಾಧೂಳಿಯು ಏಳ್ಬಣ್ಣದ ಕಿಚ್ಚೇ
ಕಾರಣತನುವಿನ ಕೃತಿಯೋ ಸವಿಯೋ ಹರಿವರಿಯೋ
ಮನುಹೃದಯದಿ ಚಿಗಿ ನಿಗಿನಿಗಿ ಜಿಗಿ ಮೇಲಕ್ಕರಿಯೋ
ಹೆಸರಾಚೆಯ ಭಾವದ ಹೂ ಸುರಿಸಿದ ಹಿರಿ ಹಿಗ್ಗೇ
ಬೆಡಗಿನ ನುಡಿ ಮೌನದ ಕುಡಿಮುಗುಳೇ ಮುಮ್ಮೊಗ್ಗೇ.

ಪೆರುಮಾಳನ ಕೆಂದಾವರೆ ಬೆಳಕಿನ ಚೆಂದಿರುಳೇ
ಬಾಳಿನ ತಿರುಕೋಡೊಳಗಿನ ಬಲು ಅರಿವಿನ ಅರುಳೇ
ಕಗ್ಗೊನೆಗಾಣ್ಕೆಯು ಒಳಗಿನ ಅಕಲಂಕಿತ ಕೆಚ್ಚೇ
ನೆಲದೆದೆಯಲಿ ನೆಲೆಮಾಡೆಲೆ ಹೊನ್‌ಹೂ ಮನಮೆಚ್ಚೇ
ಗುಟ್ಟೇ ಹುಟ್ಟೇ ಮೊಟ್ಟೆಯೆ ಹುರುಳಡಗಿದ ಹೆಸರೇ
ನಿಷ್ಕಾಲದ ನಡುನೆತ್ತಿಯ ನೇಸರೆ ಹೊಂಬಸಿರೇ
ದಿವ್ಯಮುಹೂರ್ತದ ಅತಿಥಿಯೆ ಕಾದಿರುವದು ಈಗ
ಮೂರಾಳದ ಕತ್ತಲೆ ಅದ ಬೆಳಗಿಸು ಬಾ ಬೇಗ.

ಪೆರುಮಾಳನ ಕೆಂದಾವರೆ ರತ್ನಪ್ರಭೆ ಬೀರೆ.
ಇರುಳಿಂಗಿತು ಮರ್ತ್ಯರ ಸಂಕಲ್ಪವೆ ಹೊತ್ತುತಿರೆ
ಆಸಂತ್ಯದ ತಪಚಿತ್ರಿತ ಚೀನಾಂಶುಕವಾಗೆ
ದಿವ್ಯಪ್ರತಾಪದ ಮಾಣಿಕ್ಯದ ಮೂರ್ತಿಯ ಹಾಗೆ

ಕಾರ್ಮೋಡದ ತಿಳಿನೀರಲಿ ಕೆಮ್ಮಿಂಚುರಿವಂತೆ
ಡಾಳಿಂಬರ ಮೈದುಂಬಿರೆ ತಾನೇ ಬಿರಿವಂತೆ
ನಿನ್ನಾ ಹಂಚಿಕೆ ಮಾಟಕೆ ಬೆಳಗಾದೊಲು ಹಣತೆ
ವಿಗ್ರಹಗಂಡೊಲು ಅಮರತೆ ನರನಾರಾಯಣತೆ.

ಪೆರುಮಾಳನ ಕೆಂದಾವರೆ ಬಾಳಿನ ತಾಣವಿದೋ
ವರ್ಣಕ್ರಮ ಬಣ್ಣಸರಂಗೊಂಡಿಹ ವೀಣೆಯಿದೋ
ದಿವ್ಯೇಚ್ಛೆಯೆ ಮೈದಾಳಿದೆ ನೇರಿಳೆ ಬಣ್ಣದೊಳು
ಶತದಳದೊಲು ದಳದಳದಲಿ ಮಣ್ಣಿನ ಕಣ್ಣಿನೊಳು
ನೆಲ ಬಾಸಿಗು ನಿಚ್ಚಣಿಕೆಯ ನಿಲ್ಲಿಸು ನಿಲ್ಲಿಸೆಲೇ
ಮರ್ತ್ಯವು ಮರಣವನರಿಯದ ಹಾಗಿರಲಿಲ್ಲಿ ಸೆಲೆ
ಮಧುಮಂತ್ರದ ಛಂದಸ್ಸನು ಪಲ್ಲಟಿಸುವ ಹಾಗೆ
ಕಾಲನ ಕಂದರ ಮಾಡೈ ಮಾರ್ಕಂಡೆಯರಾಗೆ.

ಪೆರುಮಾಳನ ಕೆಂದಾವರೆ ನಲುಮೆಯ ನಲಿನವಿದೋ
ಗುರುಕಾರುಣ್ಯದ ಭಾವಜ್ವಾಲಾಮಾಲೆಯಿದೋ
ಎಂದೆಂದಿನ ಮೊಗದೊಳಗಿಹ ಹಿಗ್ಗಿನ ನಾಚಿಕೆಯೋ
ಬಾಳಿನ ಆಳವ ತುಂಬಿದ ಮಾಣಿಕವೀಚಿಕೆಯೋ
ಪ್ರಕೃತಿಯ ಪಾತಾಳದ ಎದೆಯಾಳವೆ ಬಿಕ್ಕುತಿರೆ
ಬಾ ಬಲವೇ ಬಾ ನಲಿವೇ ಚೆಲುವೇ ಉಕ್ಕುತಿರೆ.
ಬಿಸವಂದದ ನಂದನಬನ ಮಾಡೀ ಜಗವಿಂದು
ಬಾಳಾಗಲಿ ಚಿನ್ಮೋದದ ಮುತ್ತಿನ ಸರವೊಂದು.

# ಮಾನಸ ಆತ್ಮದಲ್ಲಿ

• ( ಸಾವಿತ್ರಿ )

ಕೊನೆಗಲ್ಲಿ ಬಂತು ಬರಿದೆನುವ ಬಯಲು ಆ ಉದಾಸೀನ ಬಾನು.
ಕೋಟಿ ಪ್ರಶ್ನೆ ಏನೇನು? ಇರಲಿ ಉತ್ತರವು ಬ್ರಹ್ಮ ನಾನು.
ವಿಶ್ವ ಹೇಳುತಿದೆ ಮೌನ ಕೇಳುತಿದೆ ಮನನ ಏಕತಾನು.
ಜೀವ ಜಿಜ್ಞಾಸೆಗಿಲ್ಲ ಕೊನೆಯು ಪ್ರತಿ ಮೌನ ಕಾಮಧೇನು.

ಲವಲವಿಕೆಯೆಲ್ಲ ಎಕ್ಕಕ್ಕಿ ನಡೆದು ಮುಗ್ಗರಿಸಿಕೊಂಡು ಬಿತ್ತು.
ಬರಿ ಸಾಮಸೂಮ ಹಬ್ಬುತ್ತ ಒಮ್ಮೆಗೆಲೆ ಸ್ತಬ್ಧವಾಗಿ ಇತ್ತು.

*           *           *           *

ನಿರಾಕಾರ, ನಿಶ್ಚರ್ಯ ಮತ್ತು ನಿಃಶಬ್ದ ಪುರುಷನೊಬ್ಬ.
ಹೊತ್ತು ಹೊರತಾಗೆ, ತನ್ನ ತಿಳಿದವನು ತಾನೆ ತಾನು ಆಗಿ,
ನಿಸ್ತರಂಗದಾ ಆಳದಲ್ಲಿ ಅರಿವೆನಿಸಿ ಆಗಳೂನೂ
ನಿರ್ಮಾತನಲ್ಲ, ನಿರ್ಮಾಣವಲ್ಲ, ಪೂರಾ ಅಜಾತನಾಗಿ

ಒಂದರದೆ ಹಲವು, ಇವನಿಂದೆ ಹರವು, ಎರವಿಲ್ಲದೊಬ್ಬನೊಬ್ಬ,
ಇಲ್ಲದಕೆ ಆಳತೆ ಬೆಳ್ಳಂ ಬೆಳಕು—ಮುಸುಕಿತ್ತು ಗುಪ್ತವಿರಿಸಿ.
ಅವ್ಯಕ್ತ ತನ್ನ ಆವರಣಗಳಲಿ ಕಾಪಾಡಿದಂತೆ ಉಳಿಸಿ,
ವಿಶ್ವದೊಂದು ವಿಷ್ಕಂಭದಾಚೆ ಲೋಕಾಲೋಕ ದಾಟಿ,
ಬ್ರಹ್ಮದಕ್ಷರದ ಪರಂಧಾಮ ಏಕೋ ಏಕವೆನಿಸಿ,

ಅರಿದಾದ ಗೂಢಕಾರಣವು ತಾನು ದುರ್ಭೇದ್ಯದಾತನಾಗಿ,
ಚಿರಂತನವು ತಾ, ತಾನನಂತ್ಯಕೇವಲವಗಮ್ಯವಾಗಿ.

*           *           *           *

ಆಕಾರವಿರದ ಆಕಾರವೊಂದು ಆತ್ಮಾರ್ಥವೆಂದು ತಿಳಿಯೆ,
ಹುಹದ್ಭೂತ ಗತಿಸಿರಲು ಅದರ ಘನಛಾಯೆ ಹಿಂದೆ ಉಳಿಯೆ,
ಆ ಅಪಾರ ಪಾರಾವಾರದಲ್ಲಿಳಿವ ಮೊದಲು ಗಳಿಗೆ,
ಅಳಿವೆ ಅಲೆಯಲೆಯ ಕೊನೆಯ ಕಲೆಯ ಅನುಭವದ ಹಾಗೆ ಕಳೆಯೆ,

ಶೂನ್ಯಸಾಗರದ ತೀರದಲ್ಲಿ ಇಂಗಿಂಗಿ ಜಡಧಿ ಹೋಗೆ,
ಬಯಲು ಭಾವನೆಯ ತೇವ ಭಾವಿಯಲಿ ಆರಿಹೋದ ಹಾಗೆ,
ಅವಕಾಶವನ್ನು ನೆಂಬಿಲ್ಲ ಎಂಬ ಮಹದಾತ್ಮಧ್ಯಾನ ಪ್ರಖರ,
ಕಾಲವನೆ ಕೊಸರಿ ನಿಡಿದಾದ ತಾನು ಶಾಶ್ವತದ ಶೂನ್ಯಶಿಖರ,

ಅದ್ಭುತವು ಭವ್ಯ ವ್ಯಭಿಚರಣೆ ಇದರ ಸುಸ್ಥಾಣು ದಾಂತಶಾಂತ.
ಜಗಜೀವಗಳನು ತಾ ಹೊರಗು ಮಾಡಿ ನಿಬ್ಬೆರಗು ಮೌನವಾಂತ
ಎರಡರಿಯದೊಂದು ಕೈವಲ್ಯ ನೈಜ ಬರಿಬೆತ್ತಲೆತ್ತಲೂನೂ.
ಕಂಡಿತ್ತು ಅವನ ಕಡು-ರಾಗಿ ಜೀವ ಅರಸರಸಿ ಕೊನೆಗೆ ತಾನು.

*           *           *           *

ಆಳಾದ ಶಾಂತಿ ಅಲ್ಲಿತ್ತು, ಇಲ್ಲ ಹೆಸರಿರದ ಶಕ್ತಿಯಾಕೆ
ಇರಲಿಲ್ಲ ಅಲ್ಲಿ ಮಾಧುರ್ಯವಂತೆ, ಮಾಶಕ್ತಿ ನಮ್ಮ ಮಾತೆ
ತನ್ನೆದೆಗೆ ಅವಚಿಕೊಳುವವಳು, ತನ್ನ ಸಂತತಿಯ ಬಾಳ್ಕೆ ಜೋಕೆ.

ಏನವಳ ಹಿಡಿತ, ಸಕಲ ಪ್ರಪಂಚ ಆ ಅಗಲ ತಕ್ಕೆಯಲ್ಲಿ
ನೆಲೆ ಹತ್ತದಂಥ ಹರ್ಷಪ್ರಮೋದ ಆನಂತ್ಯದಬ್ಧಿಯಲ್ಲಿ
ಸಾಳೆ ನಾಡಿದಿನ ಬಾಳಕಾಳು ಬೆಳೆಸೆನುವ ಮೋದಮುದ್ರೆ
ದೈವದುನ್ಮಾದದಲ್ಲಿ ಬಿಳಿಗಾವು ಎದ್ದ ಭಾವಭದ್ರೆ.

*           *           *           *

ಬೆಳಕುಕತ್ತಲೆಯ ಎರಡು ಗೋಲಗಳು ಒಂದನೊಂದು ದೂಡೆ,
ಮೇರೆಗೆರೆಯಲ್ಲಿ ಆತ್ಮಚರಿತಕ್ಕೆ ಗೀರುಹಾದಿ ಮಾಡೆ

ಕ್ಷಣಿಕ ಘಟನೆಗಳ ರಾಜ್ಯದಲ್ಲಿ; ಜೀವಪ್ರಪಂಚದಲ್ಲಿ.
ಬದುಕಲಿಕ್ಕೆ ಸಾಯುವರು ಅಲ್ಲಿ ಬದುಕುವರು ಸಾವಿಗೆಲ್ಲಿ?

ಮರಳಿ ಮರಳಿ ಮರಣವನೆ ಉಂಡು ಅಮರತ್ವ ಭೋಗಭಾಗಿ
ತನ್ನ ಕೃತಿಯ ಗೋಪುರದ ಚಕ್ರದಲಿ ವಕ್ರವಕ್ರವಾಗಿ
ಆಡಿದ್ದೆ ಆಡಿ ಮಾಡಿದ್ದೆ ಮಾಡಿ ಬಲಗೊಂಬುವಂತೆ ಆಗಿ

ಮೂಲ ಭಂಡವಲು ಮುಗಿಯಲಿಲ್ಲ, ನಿಜ, ಬೆಳೆಯಲಿಲ್ಲ ಕೂಡ
ಜ್ಞಾನವೆಲ್ಲ ಅಜ್ಞಾನದಂತೆ ಮೊದಲಿದ್ದ ಹಾಗೆ ಮೂಢ.
ಆತ್ಮದಾನಂತ್ಯದಿಂದ ಮರೆಯಾಗಿ ಅದುವು ಸಾಗುತಿತ್ತು.
ಇರವು ಬಂಧನದ ಬಾಳು ; ಸಾವುದೇ ಮುಕ್ತಿ ಎನಿಸಲಿತ್ತು.

# ಸಾವಿತ್ರಿ

ಕತ್ತಲವೆ ಇತ್ತು ಇನ್ನೂನು ದಾರುಣಾರಣ್ಯದಂತೆ ಎಲ್ಲ
ಆದರಲ್ಲಿ ಅಲ್ಲಿ ಬದಲಿಲ್ಲ ಇಷ್ಟು ಅದರಾಶೆ ಕೂಡ ಇಲ್ಲ
ಸತ್ತ ಶಾಶ್ವತಿಯ ಸಾಯದಿರುವ ನಿಃಸತ್ತ್ವ ಭೂತವಲ್ಲ !

ಕರಿಕನಸು ಇರುವ ಬರಿಮನೆಯ ಕೆಳಗೆ ಹುಸಿಬದುಕು ಮಾಡುವವರು
ಇಲ್ಲೆಂಬ ನಾಡಿಗೆತ್ತೇನೊ ಹೊರಟ ಆ ಕುರುಡು ದಾರಿಯುವರು
ಗೊತ್ತಿಲ್ಲ ಎತ್ತ ಗುರಿಗೆಲ್ಲೆಯಿಲ್ಲ, ಓ ಹೊರಟೆ ಹೊರಟರವರು

ತಮದಿಂದ ಹೊರಟು ಅತಿತಮದ ಒಳಗೆ ಹುಸಿಮರಣದೊಳಗೆ ಮರಣ
ಕಡು ಅಸತ್ತಿನುದ್ದೇಶರಹಿತ ಬಯಲಲ್ಲಿ ನಡೆದು ಚರಣ
ನಿರಾಕಾರ ನಿರ್ಗಮನಶೂನ್ಯ ನಿಸ್ತಬ್ಧ ನಿರಾವರಣ

ಪರಿಣತಿಯೂ ಇರದ ಹತವೀರ್ಯಪ್ರಭೆಯ ಗತಿಗೆಟ್ಟ ಛಾಯೆ ಬಳಲಿ
ಆಶೆಯುಳಿದ ನಿಶೆಯಲ್ಲಿ ಬಿಟ್ಟುಹಿಡದವರ ಹೆಜ್ಜೆಗಳಲಿ
ಕಳೆದ ಜಯದ ಉಳಿದೊಂದು ಸ್ಮೃತಿಯ ತೆರ ಬರುತಲಿತ್ತು ತೊಳಲಿ

# ಯಕ್ಷಿ

ನೀನಾರು ಬಂದೆ ಅಜ್ಞಾತ ನಾಮವನು ತೊಟ್ಟುಕೊಂಡು ಯಕ್ಷಿ
ಸುಪ್ತ ಜ್ವಾಲೆಗಳ ನೇತ್ರದವಳು ಘನರಾಜ ನೀಲಪಕ್ಷಿ

ಮರೆತುಹೋದ ಹೊತ್ತೊಂದು ಉದಿಸಿ ಮೂಡಿಸಿದೆ ಭವ್ಯ ಆಸೆ
ನಿಶಾಗುಹೆಯು ತೆರೆದಾದ ಅದ್ಭುತವ ಬರೆವ ಅಗ್ನಿರೇಷೆ

ರಾಗ ಜೀರ್ಣ ಸೂತ್ರಗಳ ಚಳಕ ತೊರೆದಿತ್ತು ತ್ಯಾಗಿ ಹೃದಯ
ರಾಜಪಥದ ಸ್ವರ್ಗೀಯ ಮಧುರ ಸ್ವಾತಂತ್ರ್ಯವಾಯ್ತು ಉದಯ.

# ವಚನಗಳು

೧

ಯಾವ ನೀರೂ ಸಾಕು ರಾಜಕೀಯನ ತೃಷೆಗೆ,
ಬೇಕೇಕೆ ಬೇರೆ ಒರತೆ ?
ಜಂಗಮ ಜಗತ್ತಿನಲಿ ರಾಜ್ಯಧುರಧೀರರದು
ಇಹುದಣ್ಣಾ ತುಂಬ ಕೊರತೆ.

ಭೂಮಿ ಭೂಮಾನಂದಕಾಗಿ ಓಗರೆದಿತ್ತು
ಬಂತು ಬೇರೆಯ ನೆಲೆಯ ಹಿರಿಯ ಮಹಿಮೆ.
ದೇವದ್ರವ್ಯವೆ ಇಳಿದು ಮನುಜರೂಪವ ತಳೆದು
ತೋರಿತ್ತು ಗುರುವಿನಾ ದೊರೆಯ ಗರಿಮೆ.

ಹೋ ಶ್ರದ್ಧೆ, ಭೌತಿಕವು ಆದರೂನೂ
ಆ ಶ್ರದ್ಧೆ ಕ್ರಿಯಾಶೀಲ
ನಂ, ಬಿಗಿಯೆ ಬಿಗಿಯು ಅದು ಪುರುಷ
ಧಾತು ಶ್ರೀಶ್ರದ್ಧೆ ಜೀವಕೀಲ.

ಅನುಭವ ಸಹ ಅನುಭಾವವು
ಅನುಭೂತಿಯ ಕಂಪ
ಆಳದೊಳಿದೆ ಬಾಳಿನ ಬೆಲೆ
ಭಾವಿಸು ಆ ತಂಪ.

ಪ್ರಕೃತಿ ಯಂತ್ರಕೃತ ಒಡವೆಯಲ್ಲ
ಈ ಒಡೆಯನ ಒಡನಾಡಿ
ಆದರ ಗತ್ತು ಓ ಈ ಜಗತ್ತು ತಾನ್
ಅದೇ ಗಾಡಿ ಮೋಡಿ

ಅತ್ತರೆ ಮುತ್ತಿಲ್ಲ,
ನಸುನಗೆ ಭಂಗಾರ;
ಮುತ್ತಿಗೆ ಅತ್ತಿಲ್ಲ,
ಬೆರೆವುದೆ ಶೃಂಗಾರ

ಉದಾಸೀನದಲಿ ಬರುವ ವಿಸ್ಮೃತಿಯ
ಭೇದ ಭೇದ ಮಾಡಿ
ಬೇಡಿಕೊಳುತಿರುವೆ, ತೋಡಿಕೊಳುತಿರುವೆ
ನಿನ್ನ ಅರಿವು ಮೂಡಿ

ಈ ವಿಚಾರ ಸಂತತಿಯು ಸಂಚರಿಸ
ದಂತೆ ಅದರ ಜೋಡಿ
ನೀನು ಎಡೆಬಿಡದೆ ಬಾರೊ ದೊರೆಯೆ,
ಬಗೆಬಗೆಯ ಕೂಡಿ ಕೂಡಿ.

ಏಕಾಕಿ, ಪರಮಶಮಿ ಆಗಿ ನಮ್ಮೀಮನವು
ನಿನ್ನ ನೆಲೆಯಲ್ಲಿಯೇ ನೆಲೆಸಬೇಕು
ಆ ಗಿರಿಯ ತುದಿಯಿಂದ ಚೊಕ್ಕನೈಜವ ಕಂಡು
ಭ್ರಮೆಯಿಂದ ಐಕ್ಯಕ್ಕೆ ಒಲಿಸಬೇಕು

ಚೈತನ್ಯವು ಸ್ಥಿರಸ್ಥಾಣುವಿನಂತೆ
ಕದಲುಬದಲಿರಲಿ ತೋರಿಕೆಗೆಂತೇ
ಎಷ್ಟೆ ಇರಲಿ ಸಂಗ್ರಾಮದ ಚಿಂತೆ

ಮೌನಗರ್ಭದಲಿ,
ನಿರಾಕಾರ ನಿಃಸೀಮಾನಂದವ ಕಂಡೆ

ಲೋಕವು ಯಾವುದೆ ಬರಲಿ
ಭೂಮಿಕೆ ಯಾವುದೆ ಇರಲಿ
ಸತ್ ಚಿತ್ ಆನಂದದ ಮುರಲಿ
ಚೈತನ್ಯದ ಅರಿವಿನೊಳಿರಲಿ

ಅತಿದುರ್ಗಮ
ಅತ್ಯವಶ್ಯ
ಪಾರ್ಥಿವ ಭೂಮಿಕೆಯಲ್ಲಿ
ಭಗವತ್ ಚೇತನವಲ್ಲಿ
ನೆಡುವುದು, ನಾಟುವುದು.

ಚೆಲುವಿದ್ದಲ್ಲಿಯೆ
ನಲಿವಿಹುದು.
ಅದರ ಒಲುವಿನಲೆ
ಬಲವಿಹುದು.

ಸಂಗ್ರಾಹಕ ಐಕ್ಯದೊಳಿದೆ
ಸರ್ವೈಕ್ಯದ ಹಾದಿ

ಮಾತು ಹಡೆಯುವದೆಲ್ಲ, ಮೌನಗರ್ಭದ ಬದುಕು
ಬಾಯ್ಬಡಕಗೇನು ಗೊತ್ತು !
ಬೆಳಕು ಕತ್ತಲೆಯಾಟ ತಿರುಗುವೀತಿರೆಗೆ ಇದೆ
ಸೂರ್ಯನಿಗೊ ಒಂದೆ ಹೊತ್ತು.

ಕೈಗೂಡಬಹುದು ಏನೂನು ಮೂಲದಲಿ ದೇವಸ್ಪರ್ಶ ಬೇಕು

ಇದ್ದರಾಯ್ತು ಭಗವತ್‌ಸ್ಪರ್ಶ, ಕೊನೆಗಾಣಬಹುದು ಏನೂ

ಮಾಡಲಹುದು ಏನನ್ನು ಕೂಡ ಬೇಕಲ್ಲಿ ದೇವಸ್ಪರ್ಶ

ಆಗರ್ಭಜಾತ ಅಧಿಕಾರ ದೇವನಾನಂದ ದಿವ್ಯ ಐಕ್ಯ

ದೇವಗರ್ಭದಿಂದ ಭೂಮಿ, ಭುವಿಯ ಗರ್ಭದೇವನು
ಅಡಗಿ ಒಳಗೆ ಇರುವದನ್ನೆ ಹೊರಗೆ ತರುವ ಯಾವನೂ ?

ಆತ್ಮವೋಚನವ ಮಾಡುತಿರುವದೇ ಬೆಳಕಿಗೊಂದು ಆದಿ
ಸೃಷ್ಟಿಯಲ್ಲಿ ಪರಿಪೂರ್ತಿಗೊಂಬುದೇ ಐಶ್ವರ್ಯದ ಹಾದಿ.

ಹೊನ್ನಾಗಿಸುತಿವೆ ಹೂವು ನೆಲದೀ ಕೆಮ್ಮಣ್ಣ
ಕಾಣದೆ ಅರಳುತ್ತಲೆ ಇದೆ ಶಿವಕರುಣೆಯಣ್ಣ

ರಾತ್ರಿಯಲ್ಲ ನಮ್ಮ ಆದಿ ರಾತ್ರಿಯಲ್ಲ ಅಂತ್ಯವು
ತಾಯ ಬಸಿರ ಬೆಳಕೆ ನಮ್ಮ ಚಿರಂತನದ ಚಿಂತ್ಯವು
ಬೆಳಕಿನ ಬಾಂಧವ್ಯದಿಂದ ತಾಯ ಸೆರಗ ಹಿಡಿದೆವು.
ಬೆಳಕಿನಿಂದ ಬಂದೆವಣ್ಣ ಬೆಳಕಿನತ್ತ ನಡೆದೆವು

ಬೇನೆ ಬಲ್ಲ ತಾಯಿಗೆಲ್ಲ ಗೊತ್ತು ಹೊತ್ತು ಕಾಲವು

ಮೂರ್ತಿ ಮಾಡುತ್ತಿಹುದು ಮರವೆಯ ಮುದ್ದೆಯಾದೀ ಮಣ್ಣನು
ಒಗರು-ಹುಳಿಗಳ ಪಾಕದಲ್ಲಿಯೆ ಬೆಳೆಸುವನು ಸವಿಹಣ್ಣನು.

ಎದೆಯ ಶೂಲಿ ಲಯಗೊಳಿಸಬೇಕು ತಾನಾ ತ್ರಿಶೂಲಿಯಲ್ಲಿ

ಒಳಗೆ ಹೂತಿಹುದು ಒಂದು ಶಕ್ತಿ, ಅದು ತೆರೆವುದೊಂದು ಕಣ್ಣ
ನಮ್ಮ ಮನನವನು ಮಿಕ್ಕು ನಾವು ಮೇಲಾಗಿ ಇರುವೆವಣ್ಣ
ಅದನೆ ಒಮ್ಮೊಮ್ಮೆ ಮೂಡಿಸುವದು ಈ ಭೂಮಿ ಬಸಿರ ಬಣ್ಣ

ನಮ್ಮ ಕಾಣ್ಕೆ ಒಮ್ಮೊಮ್ಮೆ ಮೂಡುವದು ತೆರೆದು ಮಣ್ಣ ಕಣ್ಣ
ಒಂದು ಶಕ್ತಿ ಇದೆ ಒಳಗೆ, ಅದರಿದಿರು ನಮ್ಮ ಜ್ಞಾನ ಸಣ್ಣ
ನಂ ವಿಚಾರಗಳಿಗಿಂತ ನಾವು ಮಿಗಿಲಾಗಿ ಇರುವೆವಣ್ಣ
ಭೂಮಿ ಒಮ್ಮೊಮ್ಮೆ ತೆರೆದು ತೋರುವದು ಆ ಕಾಣ್ಕೆಯನ್ನೆ

ಅಮೃತ ಆತ್ಮ ಗೈಯುವದು ಕಾರ್ಯವನು ಗಹನಗುಹೆಯ ಸೇರಿ
ಹೃದಯ ಮನಗಳನು ರೂಪುಗೊಳಿಸುವದು ಸ್ವಪ್ರಭಾವ ಬೀರಿ
ಅಮೃತವಾಗುವವು ಆತ್ಮದೊತ್ತಡಕೆ ಮರ್ತ್ಯತೆಯನು ಮೀರಿ

ನಿಸ್ತಬ್ಧ ಹೃದಯದಲಿ ವೇದಗಳ ಧರಿಸುವಳು
ಜಯಶೀಲ ಕರವಾಳದಂತೆ ಬಲ ಮೆರೆಸುವಳು
ನೋಡುತಿರುವಂತೆಯೇ ಚಿರಸುಖವ ಹರಿಸುವಳು

ಮರಗೂಳಿ ಮಣ್ಣಿನಲಿ ಬೆಳಕು-ನೆರೆ ತುಂಬಿತ್ತು
ಕುಡಿ ಹೊತ್ತಿ ಮಡಿ-ಮೂರ್ತಿ ಮಾಡಲಾಯ್ತು
ಧ್ಯಾನದೀಪಿತ ಕಿರಣ ನಮ್ಮ ನೆಲ ಮುಟ್ಟಿತ್ತು
ದೇವ-ಜೀವರ ಮನಕೆ ಆಯ್ತು ಸೇತು

೨

ಹಸಿವೆಯಾಗಿ ಬಂದಿತ್ತು ಬಸಿರಿನಲಿ ಹಸಿದು ವಿಶ್ವದಗಲ
ಬಯಕೆಯಾಗಿ ಬೀಸಿತ್ತು ಒಲವು ತಾನಾಗಿ ಪ್ರಾಣನನಿಲ
ಬ್ರಹ್ಮಕರ್ಮ ಪ್ರತಿಸರ್ಗದಲ್ಲಿ ಬರೆ ತಾ ವಿಸರ್ಗವೆನಿಸಿ
ನೆಲದ ಒಲವಿನಲಿ ಚೆಲುವೆ ಹೂತಿತ್ತು ತಾ ನಿಸರ್ಗವೆನಿಸಿ

ಜೀವನಲ್ಲಿ ತುಂಬಿಹಳು ತಾಯಿ ತಾನಾಗಿ ದೇವನೊಲವು
ಮನೋರಾಜ್ಯವನು ನಂಬಿ ಆಳುವಳು ಅರಳಿ ಅರಿವಿನೊಳವು
ಚುಂಬಿಸುವಳು ತನ್ನತ್ತ ಎಲ್ಲ ಹೊಮ್ಮಿರಲು ಪ್ರಾಣಬಲವು
ಬಿಂಬಿಸುವಳು ಪ್ರತಿಬಿಂಬದಂತೆ ಅಂಗಾಂಗವಾಗಿ ಚೆಲುವು

ಇದ್ದುದೆಲ್ಲವೂ ತಿರುಳಿನೊಳವು, ಹಿರಿಬಲವು, ಚೆಲುವು ಒಲವು,
ನಿದ್ದೆ ತಿಳಿದು ಎದ್ದಾಗ ಬೀಜವೇ ಮರವು ಹಲವು ಫಲವು,
ಹಿಗ್ಗಿದಾಗ ಕಾಣುವದು ಕಾಣದಾನಂದಮಗ್ನನಲ್ಲಿ
ಭೂಮವೆಂಬಂತೆ ಭೂಮಿ ಮೆರೆಯೆ ವಿಜ್ಞಾನಲಗ್ನದಲ್ಲಿ

ಸದ್ಭಾವದೊಂದು ಎದೆಮಿಡಿತದಂತೆ ಓಂಕಾರ ಧ್ವನಿಸುತಿಹುದು
ಚಿತ್ತ ಚೇತನವು ಅರಿತುದನ್ನೆ ಮರೆತಂತೆ ನೆನಿಸುತಿಹುದು
ವಾಚ್ಯ ನಟಿಸಿತ್ತು ರಂಗಭೂಮಿಯಲಿ ಅನಿರ್ವಾಚ್ಯವಾಗಿ
ಸಾಕ್ಷಿ ಪ್ರೇಕ್ಷಕನ ಚಿತ್ತರಂಗದಲಿ ಹೃದಯ ಸೂಚ್ಯವಾಗಿ

ದಿವ್ಯನಾಕದಲಿ ದಿವ್ಯಲೋಕದಲಿ ದಿವ್ಯಪಾಕವಿದ್ಯೆ
ಶುದ್ಧರಸವೆ ಓ ಸಿದ್ಧರಸವೆ ಇರುವರಿವು ಹಿಗ್ಗಿ ಇದ್ದೆ
ದಿವ್ಯತೂರ್ಯ ಎಚ್ಚರಿಸುತಿರಲು ಸುತ್ತೆಲ್ಲ ದಿವ್ಯನಿದ್ದೆ
ದಿವ್ಯಸ್ವಪ್ನ ಕಣ್ತೆರವ ಮಾಡೆ ಆಹ ದಿವ್ಯ ಕಾಣಲೆದ್ದೆ

## ೩

ಮಮತೆಯಲ್ಲಿಯೂ ಸಮತೆ ಬೇಕು, ವಿಶ್ರಾಂತಿಯಲ್ಲಿ ಶಾಂತಿ.
ದುಃಖ ಸುಲಿದು ಸುಖವುಣ್ಣಬೇಕು, ನಗೆಯಲ್ಲಿ ಬೇಡ ಭ್ರಾಂತಿ,
ವೈರವಿಲ್ಲದಾ ವೀರ್ಯ ಬೇಕು, ಸೊಕ್ಕಿರದ ಶಕ್ತಿ ಬೇಕು,
ಛಂಡಿತನವಿರದ ಹಠವು ಇರಲಿ, ಆ ಸತ್ತ್ವಶ್ರದ್ಧೆ ಸಾಕು.

ಭವವು ಬೇಕು, ಅನುಭವವು ಬೇಕು, ಅನುಭಾವ ಬೇಕು ಒಳಗೆ,
ಸ್ವಯಂಭುತ್ವದಾ ಜ್ಞಾನ ಬೇಕು, ಆ ಧೀಸಮಾಧಿ ಬೆಳಗೆ
ಮೂರು ಕಾಲಕೂ ನೂರು ಕಾಲದಾ ಸೃಷ್ಟಿ ದೃಷ್ಟಿ ಇರಲಿ
ಅಷ್ಟಸಿದ್ಧಿಗಳು ಅಷ್ಟತನುವೊ ಎನೆ ಕಟ್ಟಿಕೊಂಡು ಬರಲಿ.

ದೇಹದಲ್ಲಿ ಸೌಂದರ್ಯವಿರಲಿ, ಆರೋಗ್ಯ ಪ್ರಾಣದಲ್ಲಿ-;
ಮನಸಿನಲ್ಲಿ ಉತ್ಥಾನವಿರಲಿ, ಆನಂದ ಜೀವನಲ್ಲಿ;
ಕರ್ಮದಲ್ಲಿ ಬೆಳಗಿರಲಿ ಜೀವನವು, ಧರ್ಮದಲ್ಲಿ ಕಾಮ;
ಕಾಲಿಕೈಯ ಕೈದಾಗಿ ಕುಣಿಸುವಾ ಕೃಷ್ಣಯೋಗ ನೇಮ.

ಸಹಜವೆಂದು ಇದ್ದಂತೆ ಇರಲು ಅದು ಶುದ್ಧವಲ್ಲ ಹಾದಿ.
ಸ್ವಸ್ವಭಾವದಲಿ ಆತ್ಮಮುಕ್ತ ಸಂಬಂಧವಿದೆ ಅನಾದಿ.
ಬದ್ಧರಂತೆ ತಿಣುಕುವದದೇಕೆ ಆ ಸಿದ್ಧಮಾರ್ಗ ಬೇರೆ.
ಭುಕ್ತಿಮುಕ್ತಿ ಬಾಯ್ಗೂಡಿಸಿಹವು; ಯೋಗಕ್ಕೆ ಇದುವೆ ಮೇರೆ.

ಏಕವಿದ್ದರೂ ಸರ್ವವೇಕೆ ಒಳಗೊಳ್ಳಬಾರದಣ್ಣ ?
ಸಾಂತವೆಲ್ಲ ಆನಂತ್ಯಮುಖವು ಅದಕೇಕೆ ತೋರ-ಸಣ್ಣ ?
ಜ್ಞಾನದಲ್ಲಿ ಆನಂದವಿರಲಿ, ಆನಂದದಲ್ಲಿ ಜ್ಞಾನ,
ಬ್ರಹ್ಮಮಾನದಲಿ ಬ್ರಹ್ಮಗಾನದಲಿ ಬ್ರಹ್ಮವೇಕತಾನ.

೪

ಒಲವಿನಲ್ಲಿ ಬೆಳಿ, ಒಲವಿನಲ್ಲಿ ಉಳಿ, ಒಲವೆ ಬಾಳ ಚೆಲುವು,
ಒಲ್ಲದಿಲ್ಲ, ಒಲಿಯುವದು ಎಲ್ಲ, ಒಲಿಯುವದೆ ಬದುಕು–ಬಲವು.
ನಾಂದ ನಾಲಗೆಯ ನೀರಿನಲ್ಲಿ ನೆನೆಯುವದು ನಲುಮೆ-ನಲಿವು.
ನಲ್ಲರೆದೆಯ ನನ್ನಿಯಲಿ ಹೂತು ಜಗ ತುಂಬುತಿಹವು ಹಲವು.

ಹುಂಜ ಹೇಂಟೆಗಳ ಕಾವಿನಲ್ಲಿ ರೂಪಾಯ್ತು ನೀರತತ್ತಿ
ಆಕಾಶ ತುಂಬಿ ಆನಂದವಿತ್ತು ಆನಂದವನ್ನೆ ಬಿತ್ತಿ
ಜಗವು ಜಂಗಮವು ಜೀವ-ಪ್ರಾಣಿಗಳ ಚಿತ್ರಕಾಯ್ತು ಭಿತ್ತಿ
ಇದು ಹಸ್ತ-ಮಳೆಯ ಬಿಸಿಯುಸಿರು ಹಸಿರು, ಅಲ್ಲಣ್ಣ ಕುರುಡು-ಚಿತ್ತಿ.

ಇದು ಪ್ರಕೃತಿ-ಪುರುಷ, ಓ ಬ್ರಹ್ಮಮಾಯೆ, ಅಲ್ಲಲ್ಲ! ಶೈವ-ಭಕ್ತಿ.
ಮಾತೆ ಭಂಗಾರ, ಮಾತೆ ಸಿಂಗಾರ, ಮಾಟ ಕಾವ್ಯಯುಕ್ತಿ.
ಎಲ್ಲಿಹುದು ಭಕ್ತಿ, ಅಲ್ಲಿಹುದು ಶಕ್ತಿ, ಬೇಕೇಕೆ ಒಣ ವಿರಕ್ತಿ ?
ಜ್ಞಾನಬೀಜದಲಿ ಚಿಗುರಿಬಂತು ಸಚ್ಚಿದಾನಂದ ಮುಕ್ತಿ

ಭ್ರಾಂತಿಗೀಂತಿ ಹೊರಹೊಳಪು ತರದು, ಇದು ಅಲ್ಲ ರಜತಶುಕ್ತಿ.
ಇದು ನೇತಿಯಲ್ಲ, ಇತಿಪ್ರೀತಿಸ್ವಾತಿ ಮೌಕ್ತಿಕದ ದೈವ-ಭುಕ್ತಿ.

# ಮಾತೃವಾಣಿ

ಒಳುಬೇರಿನಲ್ಲಿ ಕಡುಬೇರೆಯಾಗಿ ಚೊಕ್ಕಾದ ರೂಪವಾಂತು
ವರ ಬೇಡಿಕೊಂಬ ಸ್ಥಿರಲಗ್ನ ಬಂತು ಹತ್ತಿರಕೆ ಹೊತ್ತು ಬಂತು
ಹೇ ದೊರೆಯೆ ನಿನ್ನ ವಿಜಯಕ್ಕೆ ತಕ್ಕ ಮತಿಯೇರುವಂತೆ ಮಾಡು
ಸಟೆ ತಳ್ಳಿ ನಿನ್ನ ದಿಟದಲ್ಲಿ ಮೂಡಿ ಬರುವಂಥ ಬಲವ ನೀಡು

# ಬಂದೆ ಬಂದೆ

## ಮಾತೃವಚನ

ನನ್ನ ದೊರೆಯೆ ಸವಿಗಾರ ಸ್ವಾಮಿ ಈ ನಿನ್ನ ಕೆಲಸವನ್ನೇ
ಗೊನೆಗೊಳಿಸಲೆಂದು ಜಡಜಲಧಿತಳಕೆ ಮುಟ್ಟಿದೆನು ಮೂಲವನ್ನೇ
ಸುಳ್ಳನ್ನು ಮತ್ತೆ ಅಜ್ಞಾನನರಕ ಬೆರಳೊತ್ತಿ ಮುಟ್ಟಿಬಿಟ್ಟೆ
ಗಾಢಾಂಧಕಾರ ವಿಸ್ಮೃತಿಯ ಪರಮಗುಹೆಯಲ್ಲಿ ಪಾದವಿಟ್ಟೆ

ನಿನ್ನ ನೆನೆಪು ನನ್ನೆದೆಯೊಳಿತ್ತುದರ ಕರೆಯೆ ಹಾರಿ ಸಾರಿ
ನಿನ್ನತ್ತ ಬಂತು: ಹಾ ದೊರೆಯೆ ಎತ್ತೆತ್ತು ನಿನ್ನ ವೈರಿ
ಜಯಮತ್ತರಂತೆ ತೋರುತ್ತಲಿಹರು ಜಗದೊಡೆಯನೀಗ ಸತ್ಯ
ನೀನಿರದ ಬಾಳು ಅದು ಒಂದು ಸಾವು ಅದು ನರಕ ನಿತ್ಯನಿತ್ಯ

ಆಸೆಯನು ತಳ್ಳಿ ಸಂಶಯವೆ ಪಟ್ಟವನು ಕಟ್ಟಿಕೊಂಡು ಮತ್ತ[illegible]
ಹುಸಿಬಂಡು ಪುಂಡು ಶರಣತೆಯ ನೂಕಿ, ನಂಬುಗೆಯ ತೀ[illegible]
ಉಪಕಾರ ಸ್ಮೃತಿಯು ಹುಟ್ಟಿಲ್ಲವಿನ್ನು ಕಗ್ಗುರುಡು ಕಾಮ[illegible]ದಿ
ಕೊಲೆಗಡಕ ಬುದ್ಧಿ ಬರುತಿಹುದು ನೋಡ ದುರ್ಬಲದ ತಪ್ಪಹೊಂದಿ

ಆ ನಿನ್ನ ಮಧುರತಮ ಪ್ರೇಮಧರ್ಮ ಬಾಯ್ಗಟ್ಟಿ ಉಸಿರುಗಟ್ಟಿ
ಉನ್ಮೂಳಿಸುತಿಹುದು ಹಾ ದೊರೆಯೆ ನೀನೆ ಆಪಗೆಯ ಪಟ್ಟಗಟ್ಟಿ;
ಬಿಡುವಿಯೇನು ? ಆ ಅನೃತವನ್ನು ಆ ವಿಕೃತಿಯನ್ನು ಮತ್ತೆ,
ಸಂತಾಪ ತಾಪ ಸಂತತಿಯನೆಲ್ಲ ಆ ಮಹಾವಿಜಯದತ್ತೆ.

ಹಾ ದೊರೆಯೆ ಆಜ್ಞೆಯನು ಕೊಟ್ಟು ನೋಡು ಕಟ್ಟೆಟ್ಟ ವಿಜಯವಹುದು
ನಾ ಬಲ್ಲೆ, ನಮಗೆ ಯೋಗ್ಯತೆಯು ಇಲ್ಲ ಜಗ ಸಿದ್ಧವಿಲ್ಲ; ಅಹುದು
ಕಡುಕಟ್ಟೆ ನಂಬುಗೆಯ ತುಟ್ಟತುದಿಯ ಮುಟ್ಟೊಮ್ಮೆ ಕೂಗಿಕೊಳುವೆ.
ದೊರೆ ಹೈ ಹಸಾದ ಜಗ ರಕ್ಷಿಸಯ್ಯ ಅದು ನಿನ್ನ ಅರುಳಿನಳವೆ.

ಇದು ಏನೆ ಇರಲಿ, ಇದು ಹೇಗು ಇರಲಿ, ತೋರಯ್ಯ ಕರುಣೆದೋರು.
ಉದ್ಧಾರವಹುದು ಜಗವಮೃತವಹುದು ಭವಜಲಧಿ ದಾಟಿ ಪಾರು.
ಪಾತಾಳದಿಂದ ಎದೆಯಾಳದಿಂದ ಜೀವಾಳದಿಂದ ಒಂದು
ನಿನ್ನತ್ತ ನುಗ್ಗಿ ಹೊರಹೊಮ್ಮಿ ಹಿಗ್ಗಿ ಪ್ರಾರ್ಥನೆಯು ತಾನೆ ಬಂದು

ನಿನ್ನನ್ನು ಕಂಡೆ ಕಡುಕಾಂತಿಯಲ್ಲಿ ನೀನಾಗ ನನಗೆ ಅಂದೆ
ಎದೆಗೆಡಿಸಿಕೊಳ್ಳದಿರು, ಧೀರಳಾಗು, ಇಗೊ ನಂಬು ಬಂದೆಬಂದೆ.

# ಸದಾಶಿವಗೆ

ಶ್ರೀಗುರುವಿಗಾಗಿ ತನುಧಾರಿಯಾಗಿ ಬಂದಂಥ ಸದಾಶಿವಗೆ
ಅನಂತಾನಂತ ನತಿಯ ಉಪಕೃತಿಯ ಒಪ್ಪಿಸುವೆವು ಇವಗೆ.
ಎಷ್ಟು ದುಡಿದೆ ನೀನೆಷ್ಟು ಪಡೆದೆ ಹೇ ನವೋನವೋ ನಿನಗೆ.

ಕಷ್ಟವೇನು, ಸಂಘರ್ಷವೇನು, ಪಾಡೇನು, ತಾಳ್ಮೆಯೇನು ?
ನಮಗಾಗಿ ಕಲ್ಪ, ನಮಗಾಗಿ ಶಿಲ್ಪ ಸಾಧಿಸಿದೆ ನಮಗೆ ನೀನು.

ಬಾಗಿ ಕೂಗಿ ಬೇಡುವೆವು ನಿನಗೆ ಅರೆಚಣವು ಕೂಡ ನೋಡು
ನಮ್ಮ ಸಂಪದವು ನಿನ್ನ ಪ್ರಾಪ್ತಿ ಇದ ಮರೆಯದಂತೆ ಮಾಡು.

# ಚೈತ್ರಾಲಯ

೧

ಶಿವನುಂಡ ನಂಜು ತಿಳಿಗೊಂಡು ಮಂಜು-
ಮಂಜಾಗಿದೆ ಈ ಸಂಜಿಗೆ.
ಇದು ಉಷಾಮಿಷದ ಪೊಸನೇಹ ಸೇರಿ ಕಳೆ
ಏರಿದೆ ಹುರಿಮಂಜಿಗೆ.
ಭೌಮಾತ್ಮಭೂತಿ ಚೈತನ್ಯದೂತಿ, ಊ-
ರ್ಜಿತದಾ ಸಿರಿವಂತಿಗೆ.
ಕಥಕ್ಕಳಿಯ ಪುತ್ಥಳಿಯೆ! ಪೃಥಕ್ ಥತ್
ತಳಿಸಿದೆ ಜೀವಂತಿಗೆ.
ಜಡೆತುಂಬ ಕಣ್ಣು, ಇದು ಯಾವ ಹೆಣ್ಣೊ? ಮಾ-
ಪ್ರಾಣದ ಸ್ಯಾವಂತಿಗೆ!

೨

ಯಾವ ಅಚ್ಚರಸಿ? ಯಾವ ಋಷಿಯರಸಿ?
ಯಾವ ಭಾವಸರಸಿ?
ಯಾವ ಘಟ್ಟದಲಿ? ಯಾವ ಪಟ್ಟದಲಿ?
ಯಾವ ಮುಹೂರ್ತವಿರಿಸಿ?
ಯಾವ ನಕ್ಷತ್ರ? ಯಾವ ಸುಕ್ಷೇತ್ರ?
ಯಾವ ಪಾತ್ರ ಧರಿಸಿ?
ಝುಂಝುಣಣ ಝುಣಣ, ಝುಂಝುಣತ್ ಝುಣಣ, ಜೀ-
ವಾಣುವೃಂದ ಮೆರೆಸಿ,
ಛಂದಛಂದ ನವಬಂಧ ಪಡೆದು ಬಂ-
ದಿಹವು ಹಳತ ಮರೆಸಿ.

೩

ಛಿಳಿಲ್ ಛಿಟಿಲೆಂದು ಭುಕ್ಕ್ಕಭುಗಿಲೆಂದು
ತಟಿತ್ ತಟ್ಟಿತೆಂದೂ
ಕಣ್ಣಮುಚ್ಚಣಿಕೆ ಕಣ್ಣತೆರೆವಣಿಕೆ
ಕಣ್ಣಕಟ್ಟಿತೆಂದೂ
ಸರ್ವೋನವದ ಭವಭವದ ತವದ ವೈ-
ಭವವ ಒಟ್ಟಿತಂದು
ಕುರುಡು ಬಯಲಿಗಿಗೊ ಕಣ್ಣು ಬರೆವ ಕೈ-
ವಾಡ ಚಿಗುರ್ತಿಂದು
ದುಂದುದುಂದು ದುಂದುಭಿಸುತಿಹುದು ಇಕೊ!
ಹಲವು ಮುಖದಲೊಂದು.

೪

ಬಾರೊ ಇಲ್ಲಿ ಬೈರಾಗಿ ಬಾರೊ, ಬಾ
ಇಲ್ಲಿದೆ ತಂಗುವ ಸ್ಥಲಾ—
ತಣಿವನರಿಯದೇ ದಣಿದುಹೋದೆ, ಬಾ
ಇಲ್ಲಿದೆ ಇಂಗದ ಜಲಾ—
ಏಕೆ ರೋಸಿ, ಭಯುಗೊಂಡು ಹೇಸಿ, ನೀ
ಆಕ್ರೋಶಿಸುತಿಹೆ ಎಲಾ!
ಶಿವದ ಭಕ್ತಿಗವತಾರಶಕ್ತಿಗಿಗೊ
ಇದುವೇ ಇಂಗಿತವಲಾ!
ಬ್ರಹ್ಮಸ್ಫುರಣಕೆ ಮರಣವೆಂತು? ಅದು
ಅದುವೇ ಅಮೃತದ ಬಲಾ.

**೫**

ಹಿಮಾಲಯದ ಒಳಬಸಿರಲಿ ಕೊರೆದಿದೆ
ಯಾವುದೊ ಬ್ರಹ್ಮಾಭಯಾ–
ಚಿತ್ರನೇತ್ರಗಳು ಉನ್ಮೀಲಿಸುತಿವೆ
ಓಹೊ ತಾರಕಾಮಯಾ !
ಸೃಷ್ಟಿಯ ಕಲೆಯಾ, ಮಾಯೆಯ ಬಲೆಯಾ
ಬೀಸಿದೆ ಉದಯದ ನಯಾ
ಅರವಿಂದ ಮಿಂದ ಅರವಿಂದ ಗಂಧ ಅರಿ-
ವಿಂದಲೆ ಬಂದಿದೆ ಜಯಾ.
ಚಿತ್ರಚಿತ್ರಗಳ ಪಾತ್ರ ಕುಣಿಯುತಿವೆ
ಕಟ್ಟಿದೆ **ಚೈತ್ಯಾಲಯು.**

# ಚೈತ್ಯಾಲಯ—ಕವನಗಳ ಪ್ರಥಮ ಚರಣಗಳ ಅಕ್ಷರಾನುಕ್ರಮಣಿಕೆ

